# ವಿಪ್ಲವ

## 1857

೧೯೫೭

ಎಂ. ರಾಮಮೂರ್ತಿ

# ಮುನ್ನುಡಿ

ಹಿಂದೂಸ್ಥಾನದಲ್ಲಿ ನವೀನ ಯುಗವೊಂದು ಆರಂಭವಾಗಿದೆ. ಎಲ್ಲೆಲ್ಲಿಯೂ ಸ್ವಾತಂತ್ರ್ಯದ ಬೆಳಕು ಉದಯವಾಗುತ್ತಿದೆ. ಸಾಹಿತ್ಯ ಪ್ರಪಂಚದಲ್ಲಿಯೂ ಆ ಪ್ರಕಾಶವು ವ್ಯಾಪಿಸುವುದೆಂಬುದು ಶತಸ್ಸಿದ್ಧವಾದ ಮಾತು. ಹಿಂದೂಸ್ಥಾನದಲ್ಲಿ ಸ್ವಾತಂತ್ರ್ಯೋದ್ಯಮದ ಸಣ್ಣ ದೊಡ್ಡ ಪ್ರಯತ್ನಗಳು ಎಷ್ಟು ನಡೆದಿವೆಯೋ, ಅದನ್ನೆಲ್ಲಾ ಜನತೆಯು ಕೊಂಡಾಡಿ ಮೆರೆಯುವ ಕಾಲವಿದು. ಆ ಪ್ರಕಾಶವು ಕನ್ನಡ ಸಾಹಿತ್ಯದಲ್ಲಿಯೂ ರೂಪುಗೊಳ್ಳುವುದು ಸಹಜವೇ ಇದೆ.

ಭಾರತದ ಪ್ರಥಮ ಸ್ವಾತಂತ್ರ್ಯೋದ್ಯಮದ ಚರಿತ್ರೆ-ಕಥೆಗಳು ಇವುಗಳನ್ನು ವರ್ಣಿಸುವ ಗ್ರಂಥಗಳು ಕನ್ನಡದಲ್ಲಿ ಈಗ ಈಗ ಆರಂಭವಾಗಿದೆ. ಇನ್ನೂ ಎಷ್ಟೋ ಗ್ರಂಥಗಳು ಬರಬಹುದು... ನಾನು ಆ ಚರಿತ್ರೆಯ ಹಿನ್ನೆಲೆಯ ಮೇಲೆ ಅದೇ ಸ್ವಾತಂತ್ರ್ಯೋದ್ಯಮದ ಮುಖ್ಯ ಮುಖ್ಯ ಘಟ್ಟಗಳನ್ನು ಅಲ್ಲಲ್ಲಿ ಆರಿಸಿಕೊಂಡು ಕಾದಂಬರಿಯ ರೂಪದಲ್ಲಿ ಈ ಗ್ರಂಥವನ್ನು ರಚಿಸಿದ್ದೇನೆ. ಚರಿತ್ರೆಯ ಕಷ್ಟಗಳು ಕಾದಂಬರಿಗಳಿಗೆ ಇಲ್ಲ. ಕಾದಂಬರಿಗಳ ರಸಪುಷ್ಟಿಯನ್ನು ಚರಿತ್ರೆಗಳಲ್ಲಿ ತರುವುದು ಒಂದು ಸಾಹಸ. ನಾನು ಚರಿತ್ರೆಯ ಸತ್ಯಾಂಶಗಳನ್ನೂ ಕಾದಂಬರಿಯ ರಸಪುಷ್ಟಿಯನ್ನು ಏಕತ್ರ ಸಂಕಲನಮಾಡಿ ಈ ಕಾದಂಬರಿಯಲ್ಲಿ ರಚಿಸಿ ವಾಚಕರಿಗೆ ಒಪ್ಪಿಸಿದ್ದೇನೆ.

ಕಾದಂಬರಿಯಲ್ಲಿ ಮುಖ್ಯವಾಗಿ ಇರಬೇಕಾದ ಒಂದು ಸಂಪ್ರದಾಯವು ಈ ಗ್ರಂಥದಲ್ಲಿ ಉಲ್ಲಂಘಿಸಲ್ಪಟ್ಟಿದೆ. ಅದೇನೆಂದರೆ ಒಬ್ಬ ಮುಖ್ಯ ಕಥಾನಾಯಕ, ಒಬ್ಬಿಬ್ಬರು ಕಥಾನಾಯಕರು, ಅವರ ಕಷ್ಟ ಸುಖಗಳು ಅವುಗಳನ್ನು ಚಿತ್ರಿಸುವುದೇ ಇಂದಿನ ನಮ್ಮ ಕಾದಂಬರೀ ಪ್ರಪಂಚದ ಸಂಪ್ರದಾಯ. ಈ ಗ್ರಂಥದಲ್ಲಿ ವಿಶಾಲ ಭಾರತದ ವೀರ ಕಥೆಗಳು, ಬ್ರಿಟಿಷರ ಆಡಳಿತದ ವಿಧ್ವಂಸಕ ಗಾಥೆಗಳು ನಾನಾಮುಖವಾಗಿ ಇಲ್ಲಿ ಚಿತ್ರಿತವಾಗಿದೆ. ಇಲ್ಲಿ ಇಡೀ ಭಾರತವೇ ರಂಗಭೂಮಿ. ಆ ಭಾರತದ ವೀರ ತೇಜಸ್ವಿನ ಪ್ರಕಾಶ ನಿರ್ವಾಣಗಳ ಕಥೆಯಿದು. ಇವರಲ್ಲಿ ಒಬ್ಬ ಕಥಾನಾಯಕನಿಲ್ಲ. ಒಂದು ಕಥೆಯಲ್ಲ. ಆದರೆ ಅವೆಲ್ಲಕ್ಕೂ ಮೂಲಸೂತ್ರವಾಗಿ

ಒಂದೇ ಒಂದು ಕಥೆಯಾಗಿ ಇಲ್ಲಿ ಚಿತ್ರಿಸಲ್ಪಟ್ಟಿರುವುದೆಂದರೆ ಭಾರತದ ಪ್ರಥಮ ಸಂಗ್ರಾಮ. ಒಂದು ವಿಧಾನವಲ್ಲಿ ಅನೇಕ ಪುಷ್ಪ ವೃಕ್ಷಗಳಿಂದ ಪುಷ್ಪಿಸುವ ನಾನಾಜಾತಿಯ ಪುಷ್ಪಗಳು ಇಡೀ ವಾಥಾವರಣವನ್ನು ಘಮ ಘಮಿಸುವಂತೆ ಹೇಗೆ ಮಾಡುತ್ತವೆಯೋ ರಣಭೂಮಿಯಲ್ಲಿ ನಾನಾಶಸ್ತ್ರ ಗಳ ಝಣ ಝಣಾತ್ಕಾರವು ಹೇಗೆ ಒಂದು ರಣಧ್ವನಿಯನ್ನು ಹುಟ್ಟಿಸು ತ್ತದೋ ಹಾಗೆ ಈ ಕಾದಂಬರಿಯು ನಾನಾವ್ಯಕ್ತಿಗಳ ಸಾಹಸದ ಕಥಾ ಗುಚ್ಛದಂತೆ ಬರೆಯಲ್ಪಟ್ಟಿದೆ.

ಕನ್ನಡವಲ್ಲಿ ಇದೊಂದ ಹೊಸ ಪ್ರಯತ್ನ. ಇಂತಹ ನಾನಾವಿಧ ವಾದ ಅಲಂಕಾರಗಳಿಂದ ಕನ್ನಡ ಮಾತೆಯು ಶೋಭಿಸಬೇಕು. ಕನ್ನಡಿ ಗರಿಗೆ ಇದು ಮೆಚ್ಚಿಗೆಯಾದರೆ ನನ್ನ ಪ್ರಯತ್ನವು ಸಫಲವಾದಂತೆ.

೪–೬–೧೯೪೭ ಎಂ. ರಾಮಮೂರ್ತಿ

## ಹುಚ್ಚನೋ ದೇಶಪ್ರೇಮಿಯೋ ?

" ಹಾರುವಯ್ಯಾ ! ಎಲ್ಲಿಗೆ ಹೋಗುತ್ತಿದ್ದೀ ? "

ಹಾರುವಯ್ಯನು ಏನೂ ಮಾತನಾಡಲಿಲ್ಲ. ಅವನು ಒಂದು ಪಂಚ ಪಾತ್ರೆಯಲ್ಲಿ ನೀರು ತೆಗೆದುಕೊಂಡು ಬ್ಯಾರಕ್ಸ್ ಕಡೆಗೆ ಹೋಗುತ್ತಿದ್ದನು. ಯಾವನೋ ಝಾಡಮಾಲಿಯು ಆರೀತಿ ಮಾತನಾಡಿಸಿದುದರಿಂದ ಅವನಿಗೆ ಸ್ವಲ್ಪ ಕೋಪವು ಬಂದಿತು. ಆದರೆ ಇಷ್ಟು ಸಣ್ಣ ಕಾರಣಕ್ಕಾಗಿ ಕೋಪ ಮಾಡಿಕೊಳ್ಳಬಾರದೆಂದು ಸಮಾಧಾನವನ್ನು ತಂದುಕೊಂಡು ಮುಂದೆ ಹೋದನು.

ಆದರೆ ಅವನನ್ನು ಕರೆದ ಝಾಡಮಾಲಿಯು ಅಷ್ಟಕ್ಕೇ ಬಿಡಲಿಲ್ಲ. ತನ್ನನ್ನುಲಕ್ಷ್ಯಮಾಡದೇ ಹೋಗುತ್ತಿದ್ದ ಬ್ರಾಹ್ಮಣನನ್ನು ಪುನಃ ಕರೆದನು.

" ಕರೆದರೂ ಹಾಗೇ ಹೋಗುತ್ತಿದ್ದೀಯಲ್ಲಯ್ಯಾ ! ನಿಂತುಕೋ. ಬಾಯಾರಿಕೆಯಾಗಿದೆ. ಸ್ವಲ್ಪ ನೀರು ಕೊಟ್ಟುಹೋಗು"–ಎಂದನು.

ಬ್ರಾಹ್ಮಣನು ಝಾಡಮಾಲಿಯ ಕಡೆಗೆ ನೋಡಿದನು. ಅಷ್ಟು ದೂರದಿಂದ ತಾನು ತಂದ ನೀರನ್ನು ಇವನಿಗೆ ಕೊಡಬೇಕು. ಅದನ್ನು ಕೇಳುತ್ತಿದ್ದಾನೆ. ಆದರೆ ಇವನ ಮಾತಿನಲ್ಲಿ ಎಷ್ಟು ಉದ್ಧಟತನವಿದೆ ! ಈ ಬಾರಿ ಬ್ರಾಹ್ಮಣನಿಗೆ ಅವನನ್ನು ನೋಡಿ ಕೋಪ ಬರಲಿಲ್ಲ. ಸಹಜವಾದ ಅವನ ಅನಾಗರಿಕತೆಯನ್ನು ನೋಡಿ ಪರಿತಾಪವಾಯಿತು.

" ಬಾ ! ನೀರು ಕೊಡುತ್ತೇನೆ"–ಎಂದು ಅವನನ್ನು ಕೂಗಿದನು.

ಝಾಡಮಾಲಿಯು ಮುಂದೆ ಬಂದು ಕೈಚಾಚಿ 'ಕೊಡು" ಎಂದನು.

ಬ್ರಾಹ್ಮಣನು ಪಾತ್ರೆಯಿದ್ದ ಕೈಯ್ಯನ್ನು ಸರ್‍ರನೆ ಹಿಂದೆಳೆದುಕೊಂಡು " ಹಾಗೆ ಕೊಡುವುದಿಲ್ಲ ! ಕೈಹಿಡಿ ! ನೀರು ಸುರಿಯುತ್ತೇನೆ " ಎಂದನು.

" ಕೈಗೇ ಕೊಡು ! ಕುಡಿದುಕೊಡುತ್ತೇನೆ "

" ಇಲ್ಲ ! ಕೊಡುವುದಿಲ್ಲ "

" ಯಾಕೆ ಕೊಡುವುದಿಲ್ಲ ! "

" ಹೆಚ್ಚು ಮಾತು ನಿನಗೇಕೆ ? ಪಾತ್ರೆಯು ನನ್ನದು. ನಾನು ಕೊಡುವುದಿಲ್ಲ."

ಝೂಥವಾಲಿಯ ಉದ್ಧಟತನವು ಹೆಚ್ಚಾಯಿತು. ಅವನು ಬ್ರಾಹ್ಮಣನನ್ನು ಮುಟ್ಟುವುದಕ್ಕೇ ಹೋದನು.

ಬ್ರಾಹ್ಮಣನು ಹಿಂದೆ ಸರಿಯುತ್ತಾ " ಹಿಂದೆ ನಿಲ್ಲು ! ನನಗೆ ಮೈಲಿಗೆಯಾಗುತ್ತದೆ. ಮುಟ್ಟಬೇಡ " ಎಂದನು.

ಬ್ರಾಹ್ಮಣನ ಮಾತು ಕೇಳಿ ಝೂಥವಾಲಿಯು ಬ್ರಾಹ್ಮಣನನ್ನು ಕೇಳಿದನು. " ಗೋವಿನ ಕೊಬ್ಬು ನೆಕ್ಕಿದರೆ ಮೈಲಿಗೆಯಾಗುವುದಿಲ್ಲವೋ ? "

ಬ್ರಾಹ್ಮಣನಿಗೆ ಅವನ ಮಾತು ಅರ್ಥವಾಗಲಿಲ್ಲ. ಅವನ ಮಾತು ಕೇಳಿ ಕೌತುಕವಾಯಿತು. ಅವನೂ ನಕ್ಕನು.

" ಹುಚ್ಚ ! ಬ್ರಾಹ್ಮಣನು ಗೋವಿನ ಕೊಬ್ಬು ತಿನ್ನುವನೇ ? ಶಾತಂ ಪಾಪಂ ಶಾಂತಂ ಪಾಪಂ "

" ನೀನು ಸೀಪಾಯಿಯಲ್ಲವೇ ? "

" ಹೌದು "

" ಗುಂಡು ಹಾರಿಸುತ್ತಿಯೋ ಇಲ್ಲವೋ "

" ಗುಂಡು ಹಾರಿಸುವುದಕ್ಕೂ ಅದಕ್ಕೂ ಸಂಬಂಧವೇನಿದೆ ?

" ಇದೆ. ಹಾರುವಯ್ಯಾ ! ಇದೆ. ಗುಂಡುಗಳ ಮೇಲಿರುವ ಜಿಡ್ಡು ಹಸು ಮತ್ತು ಹಂದಿಯ ಕೊಬ್ಬು. ಬಂದೂಕಿಗೆ ಗುಂಡು ಹಾಕುವಾಗ ಅದನ್ನು ಕಚ್ಚೀ ಚೀಪುವುದಿಲ್ಲವೇ ? "

ಆ ಮಾತು ಕೇಳಿ ಬ್ರಾಹ್ಮಣನಿಗೆ ಆಕಾಶವೇ ಕಳಚಿ ಕೆಳಗೆ ಬಿದ್ದ ಹಾಗಾಯಿತು. ಅವನ ತಲೆಯು ತಿರುಗಿತು. ಕಣ್ಣು ಕತ್ತಲು ಕಟ್ಟಿಕೊಂಡು ಬಂದಿತು. ಕೈಯಲ್ಲಿದ್ದ ಪಾತ್ರೆಯನ್ನು ಕೆಳಗೆ ಹಾಕಿ ತಲೆ ಪರಚಿಕೊಳ್ಳುತ್ತಾ ಬಾರಕ್ಸ್ ನೊಳಗೆ ಹೋದನು.

ಸಾಯಂಕಾಲವಾಗುವುದರೊಳಗಾಗಿ ಬ್ಯಾರಕ್ ಪುರದ ಬಾರಕ್ಸ್ ನಲ್ಲಿ ಈ ವಿಷಯವು ಗುಲ್ಲೋಗುಲ್ಲಾಯಿತು. ಈಗ ಬರುತ್ತಿರುವ ಹೊಸ ತೋಟಾಗಳಲ್ಲಿ ಹಸುವಿನ ಮತ್ತು ಹಂದಿಯ ಕೊಬ್ಬಿದೆ. ದಿನವೂ ಅದನ್ನವರು ಕಚ್ಚುತ್ತಿದ್ದಾರೆ. ಜಾತಿ ಕೆಟ್ಟಂತೆ ಆಗಲಿಲ್ಲವೇ ? ಎಲ್ಲ ಸೀಪಾಯಿಗಳಿಗೂ ಇದೇ ಯೋಚನೆ. ಅವರು ಸಣ್ಣ ಸಣ್ಣ ಗುಂಪು

ಗಳಾಗಿ ಸೇರಿ ಇದೇ ಮಾತನಾಡಿಕೊಳ್ಳುತ್ತಾರೆ. ಯಾರ ಬಾಯಲ್ಲಿ ನೋಡಿದರೂ ಇದೇ ಮಾತು. ಎಲ್ಲರ ಮುಖಗಳಲ್ಲಿಯೂ ಕಳವಳ. ಎಲ್ಲರಲ್ಲಿಯೂ ಒಂದು ಬಗೆಯ ಆವೇಶ.

ಇದರ ಮಧ್ಯೆ ಮಂಗಳಪಾಂಡಿಯು ಹುಚ್ಚನಂತಾಗಿದ್ದಾನೆ. ಝಾಢಮಾಲಿಯು ಹೇಳಿದ ಮಾತುಗಳನ್ನು ಕೇಳಿದ ಮೇಲಂತೂ ಅವನ ಬುದ್ಧಿಯೇ ನೆಟ್ಟಗಿಲ್ಲ ಬ್ಯಾರಕ್ಸ್‌ನಲ್ಲೆಲ್ಲಾ ಓಡಿಯಾಡುತ್ತಿದ್ದಾನೆ. ಸೀಪಾಯಿಗಳಾದರೂ ಸಿಕ್ಕಿದರೆ "ನೀನು ಯಾವ ಜಾತಿ?" ಎಂದು ಕೇಳುತ್ತಾನೆ. ಅವನ ಪ್ರಶ್ನೆಗೆ ಯಾರೂ ಜವಾಬು ಕೊಡುವುದಿಲ್ಲ. ಸುಮ್ಮನೆ ಅವನ ಕಡೆಗೆ ನೋಡುತ್ತಾರೆ–"ಕಿರಿಸ್ತಾನರ ಜಾತಿ! ಹಸು ಹಂದಿ ತಿನ್ನುವ ಕಿರಾತರ ಜಾತಿ! ಕಿರಸ್ತಾನರ ಜಾತಿ!" ಎನ್ನುತ್ತಾನೆ. ಹುಚ್ಚು ಹುಚ್ಚಾಗಿ ನಗುತ್ತಾನೆ. ಹೊರಟು ಹೋಗುತ್ತಾನೆ.

ಪದಾತೀ ಸೈನ್ಯದ ಸುಬೇದಾರನಾದ ಹರಿಸಿಂಗನಿಗೆ ಈ ವರ್ತಮಾನವು ಹೋಯಿತು. ಈ ಸಮಾಚಾರದಿಂದ ಸೀಪಾಯಿಗಳೆಲ್ಲರೂ ಆವೇಶಗೊಂಡಿದ್ದಾರೆ. ಮಂಗಳ ಪಾಂಡಿಗಂತೂ ಹುಚ್ಚೇ ಹಿಡಿದಿದೆ. ಎಂದವನಿಗೆ ವರ್ತಮಾನವು ಬಂದಿತು. ಆ ಮಾತು ಕೇಳಿ ಅವನಿಗೂ ಕಳವಳವುಂಟಾಯಿತು. ಕೆಲವು ಮಂದಿ ಸೀಪಾಯಿಗಳನ್ನು ಕರೆಸಿ ಆ ವಿಷಯವನ್ನು ವಿಚಾರಿಸಿದನು. ಯಾರಿಗೂ ಸರಿಯಾದ ವಿವರಗಳು ತಿಳಿಯದು. ತೋಟಾಗಳಲ್ಲಿ ಹಸು ಮತ್ತು ಹಂದಿಯ ಕೊಬ್ಬಿದೆ ಎಂದು ಎಲ್ಲರೂ ಹೇಳುತ್ತಾರೆ. ಮಂಗಳಪಾಂಡಿಯು ಹೇಳಿದನೆಂದು ಹೇಳುತ್ತಾರೆ. ಮಂಗಳ ಪಾಂಡಿಗೆ ಯಾರೋ ಝಾಢಮಾಲಿಯು ಹೇಳಿದನೆನ್ನುತ್ತಾರೆ.

ಹರಿಸಿಂಗನು ಆ ಝಾಢಮಾಲಿ ಎಲ್ಲಿದ್ದಾನೆಯೋ ಪತ್ತೆ ಹಚ್ಚೀರೆಂದು ಆಜ್ಞೆ ಮಾಡಿದನು. ಮಂಗಳ ಪಾಂಡಿಯನ್ನು ಕರೆಸಿದನು. ಅವನಿಗೆ ಸಮಾಧಾನವನ್ನು ಹೇಳಿದನು. ಸ್ವಲ್ಪ ಹೊತ್ತಿನ ಮೇಲೆ ಪಾಂಡಿಗೆ ಸಮಾಧಾನವಾಯಿತು.

ಮಂಗಳಪಾಂಡಿಯು "ಹಾಗಾದರೆ ನಾಳೆಯ ದಿನವೇ ನಾವು ವಿಪ್ಲವವನ್ನು ಆರಂಭಿಸಿಬಿಡೋಣ! ಫರಂಗಿಯವರನ್ನೆಲ್ಲಾ ಕೊಂದುಹಾಕಿಬಿಡೋಣ" ಎಂದು ಹೇಳಿದನು.

ಅಷ್ಟು ಹೊತ್ತಿಗೆ ಝೂಢಮಾಲಿಯನ್ನು ಹುಡುಕಲು ಹೋಗಿದ್ದವರು ಬಂದರು. ಅವರು"ಬಾರಕ್ಸ್‌ನಲ್ಲಿರುವ ಝೂಢಮಾಲಿಗಳಾರೂ ಮಂಗಳ ಪಾಂಡಿಯನ್ನು ನೋಡಿಯೇ ಇರಲಿಲ್ಲವಂತೆ ಅವನಾರೋ ಪತ್ತೆಯಾಗು ವಂತಿಲ್ಲ" ಎಂದರು.

ಆ ಮಾತು ಕೇಳಿ ಹರಿಸಿಂಗನು ಮುಗುಳುನಗೆಯನ್ನು ನಕ್ಕನು. ಅದೇ ದಿನ ರಾತ್ರಿ ಸುಮಾರು ಹನ್ನೊಂದು ಗಂಟೆಯ ಸಮಯ. ಆ ಬ್ಯಾರಕ್ಸ್‌ನ ಸೀಪಾಯಿಗಳೆಲ್ಲರೂ ಸೇರಿದ್ದರು. ತೋಟಾಗಳಲ್ಲಿ ಹಸು ಮತ್ತು ಹಂದಿಯ ಕೊಬ್ಬಿದೆ ಎಂಬ ಸಮಾಚಾರವಷ್ಟೇ ಅಲ್ಲ. ಕಲ್ಕತ್ತಾದಲ್ಲಿ ಯಾರೋ ಸೀಪಾಯಿಗಳು ಈ ತೋಟಾಗಳನ್ನು ಮುಟ್ಟುವುದಿಲ್ಲವೆಂದರಂತೆ. ಹಾಗೆಂದ ದೇಸೀ ಸೀಪಾಯಿಗಳಿಗೆ ಬುದ್ಧಿ ಕಲಿಸಲು ಬರ್ಮಾದಿಂದ ಕಲ್ಕತ್ತಾಗೆ ಸೈನ್ಯವೊಂದನ್ನು ಕರೆಸಿಕೊಳ್ಳಲು ಏರ್ಪಾಟು ನಡೆಯುತ್ತಿದೆಯಂತೆ ಈ ದಿನ

ಬಾರಕ್ ಪುರಕ್ಕೆ ಬಂದಿಳಿದಿರುವ ಬಿಳೀ ಸೈನ್ಯವು ಕಲ್ಕತ್ತಾಗೆ ಹೋಗಲು ಬರ್ಮಾದಿಂದ ಬಂದಿರುವ ಸೈನ್ಯ ಎಂದು ಬೇರೇ ಗೊತ್ತಾಗಿದೆ. ಅಂತೂ ೩೪ ನೇ ಪದಾತೀ ಸೈನ್ಯದ ಬ್ಯಾರಕ್ಸ್‌ಗಳಲ್ಲಿ ಇದು ಬಹಳ ಪ್ರಾಮುಖ್ಯವಾದ ಸಭೆ.

ಸಭೆಯಲ್ಲಿ ಹರಿಸಿಂಗನೇ ಮೊದಲು ಮಾತನ್ನು ಉಪಕ್ರಮಿಸಿದನು. ತೋಟಾಗಳಲ್ಲಿ ಹಸು ಮತ್ತು ಹಂದಿಯ ಕೊಬ್ಬಿರುವ ವಿಷಯವನ್ನು ಹೇಳಿದನು. ಈ ವಿಷಯವನ್ನು ತಾನು ನಂಬುವುದಾಗಿ ಹೇಳಿದನು. ಅದೃಶ್ಯನಾದ ಝೂಢಮಾಲಿಯು ಯಾವನೋ ವಿಪ್ಲವಕಾರನಾಗಿರಬೇಕೆಂದೂ ಈ ವಿಷಯವನ್ನು ತಿಳಿಸುವುದಕ್ಕಾಗಿಯೇ ಅವನು ಬಂದಿದ್ದನೆಂದೂ ತಾನು ಊಹಿಸುವುದಾಗಿ ತಿಳಿಸಿದನು. ಕಲ್ಕತ್ತಾಗೆ ಹೋಗಲು ಬಂದಿರುವ ಫರಂಗೀ ಸೈನ್ಯದಿಂದ ಪರಿಸ್ಥಿತಿಯು ಉಗ್ರವಾಗುವ ಸಂಭವವಿದೆ ಎಂದೂ ಹೇಳಿದನು.

ಸೀಪಾಯಿಗಳಲ್ಲಿ ಒಬ್ಬನು–"ಇದರಿಂದ ನಮ್ಮ ಜಾತಿಯು ಕೆಡಲಿಲ್ಲವೇ ? ನಾವಿದನ್ನು ಸಹಿಸುವುದು ಹೇಗೆ ? " ಎಂದು ಕೇಳಿದನು.

ಹರಿಸಿಂಗ್– ಸಹಿಸಬೇಕೆಂದು ನಾನು ಹೇಳಲಿಲ್ಲ ! ಅವರು ತಮ್ಮ ವಿನಾಶಕ್ಕಾಗಿಯೇ ಇದೆಲ್ಲವನ್ನೂ ಮಾಡಿಕೊಳ್ಳುತ್ತಿರುವರು.

ಪಾಂಡಿ– ಹಾಗಾದರೆ ನಾಳೆಯೇ ಕ್ರಾಂತಿಯನ್ನು ಆರಂಭ

ಬಿಡೋಣವೇ ?

ಹರಿಸಿಂಗ್–"ಅದಾಗದು ! ನಾಳೆಯದಿನವೇ ಆರಂಭಿಸುವುದಕ್ಕಾಗುವುದಿಲ್ಲ !"

ಪಾಂಡಿ–ಕ್ರಾಂತಿಗೆ ನಾವು ಒಪ್ಪಿದ್ದೇವೆ. ಕ್ರಾಂತಿ ಸ್ವೀಕಾರದ ಚಿನ್ಹೆಯಾದ ಕೆಂಪು ಕಮಲವನ್ನು ಸ್ಪರ್ಶಿಸಿದ್ದೇವೆ. ಹಾಗಿರುವಾಗ ನೀವು ಆರಂಭಿಸಕೂಡದೆಂದು ಹೇಳುವುದು ಸರಿಯಲ್ಲ !

ಹರಿಸಿಂಗ್–ನಿಜ ! ಆದರೆ ಇನ್ನೂ ಚಪಾತಿಗಳು ಬಂದಿಲ್ಲ. ಕ್ರಾಂತಿಯ ದಿನವು ನಿರ್ಧರಿಸಲ್ಪಟ್ಟಿಲ್ಲ.

ಪಾಂಡಿ–ಚಪಾತಿಗಳು ಬರುವುದು ಯಾವಾಗ ? ಕ್ರಾಂತಿಯ ದಿನವು ನಿರ್ಧರಿಸಲ್ಪಡುವುದೆಂದಿಗೆ ? ನಾವು ಕ್ರಾಂತಿಯನ್ನು ಆರಂಭಿಸುವುದೆಂದು ? ಅಷ್ಟು ಹೊತ್ತಿಗೆ ನಾವೆಲ್ಲರೂ ಪತಿತರಾಗಿ ಹೋಗುತ್ತೇವೆ.

ಹರಿಸಿಂಗ್–ಪಾಂಡಿ ! ಸಮಗ್ರ ಭಾರತ ವರ್ಷದಲ್ಲಿ ಕ್ರಾಂತಿಯ ಸಮಸ್ತ ಸಿದ್ಧತೆಗಳೂ ಆಗುವವರೆಗೆ ನಾವು ಕಾಯಬೇಕು. ಅವಸರ ಆವೇಶಗಳಿಂದ ಪ್ರಯೋಜನವಿಲ್ಲ. ನಾನಾಸಾಹೇಬನಿಂದ ಆಜ್ಞೆಯು ಬರುವವರೆಗೆ ನಾವು ವಿಪ್ಲವನ್ನಾರಂಭಿಸುವುದು ಸಾಧ್ಯವಿಲ್ಲ.

ಪಾಂಡಿ–ಧರ್ಮದ ರಕ್ಷಣೆಗಾಗಿರಾಜ್ಯವನ್ನು ಸಾಧಿಸಬೇಕೆಂದಿದ್ದೇವೆ ಧರ್ಮವೇ ನಾಶವಾದ ಮೇಲೆ ರಾಜ್ಯವೇಕೆ ?

ಸೀಪಾಯಿಗಳೆಲ್ಲರೂ ಮಂಗಳ ಪಾಂಡಿಯೊಡನೆ ಸಹ ಮತವುಳ್ಳವರಾಗಿಯೇ ಇದ್ದರು. ಹರಿಸಿಂಗನೂ ಒಳಗೊಳಗೇ ಕುದಿಯುತ್ತಿದ್ದನು. ಆದರೆ ನಾನಾಸಾಹೇಬನಿಂದ ಕ್ರಾಂತಿಯು ಆರಂಭಿಸಲ್ಪಡಬೇಕೆಂಬ ಸಂದೇಶವು ಬರುವವರೆಗೆ ಅವರು ಸಿದ್ಧರಾಗಿರಲಿಲ್ಲ.

ಆ ರಾತ್ರಿಯು ಕಳೆದು ಹೋಯಿತು. ಮಾರನೆಯ ದಿನ ಪ್ರಾತಃಕಾಲ, ಮಂಗಳ ಪಾಂಡಿಯು ಮೈದಾನದಲ್ಲಿ ಬಂದು ನಿಂತನು. ಸೀಪಾಯಿಗಳನ್ನು ಕರೆದನು. ಹಲಕೆಲವು ಸೀಪಾಯಿಗಳು ಇದೇನು ನೋಡೋಣವೆಂದು ಅಲ್ಲಿ ಹೋಗಿ ನಿಂತರು. ಪಾಂಡಿಯು ಕೂಗಿ ಹೇಳಿದನು "ಸಹೋದರರೇ ! ಏಳಿರಿ ! ಮೇಲೇಳಿರಿ ! ಯಾಕೆ ಹಿಂಜರಿಯುತ್ತೀರಿ ! ಸ್ವಧರ್ಮ ಸ್ವರಾಜ್ಯಗಳ ಹೆಸರಿನ ಮೇಲೆ ನಿಮ್ಮನ್ನು ಬಲಾತ್ಕಾರ ಮಾಡುತ್ತೇನೆ–ಮುಂದೆ ಬನ್ನಿರಿ !"

ಸೀಪಾಯಿಗಳೆಲ್ಲರೂ ಅಲ್ಲಿಯೇ ನಿಂತುಕೊಂಡಿದ್ದರು. ಬ್ಯಾರಕ್ಸ್‌ಗಳ ಒಳಗಿದ್ದವರೂ ಹೊರಗೆ ಬಂದು ನಿಂತುಕೊಂಡರು. ಸೀಪಾಯಿಗಳೆಲ್ಲರೂ ಗುಸಗುಸಗುಟ್ಟುತ್ತಾ ನಿಂತುಕೊಂಡಿದ್ದರು. ಮಂಗಳ ಪಾಂಡಿಯು ಮಾತ್ರ ಹುಚ್ಚನಂತೆ ಕೂಗಿಕೊಳ್ಳುತ್ತಿದ್ದನು.

ಈ ಗಲಭೆಯನ್ನು ಕೇಳಿ ಸಾರ್ಜೆಂಟ್ ಮೇಜರ್ ಹ್ಯೂಸರ್ ಬಂದನು. ಅವನು ಮಂಗಳ ಪಾಂಡಿಯು ಕೂಗುತ್ತಿದ್ದುದನ್ನು ನೋಡಿ ಇತರ ಸೀಪಾಯಿಗಳನ್ನು ಉದ್ದೇಶಮಾಡಿ "ಪಾಂಡಿಯನ್ನು ದಸ್ತಗಿರಿ ಮಾಡಿರಿ" ಎಂದು ಹೇಳಿದನು.

ಸೀಪಾಯಿಗಳು ಮೌನವಾಗಿ ನೋಡುತ್ತಿದ್ದರು. ಅವರಲ್ಲಿ ಯಾರೂ ಮುಂದೆ ಬರಲಿಲ್ಲ.

ಹ್ಯೂಸರ್ ಕೋಪದಿಂದ ಸೀಪಾಯಿಗಳ ಮೇಲೆ ರೇಗಿದನು. ಅವರು ಅದನ್ನು ಲಕ್ಷ್ಯಮಾಡಲಿಲ್ಲ. ಆದರೆ ಮಂಗಳ ಪಾಂಡಿಯು ರೈಫಲ್ ಮೇಲೆತ್ತಿ ಅವನ ಮೇಲೆ ಗುಂಡು ಹಾರಿಸಿದನು. ಹ್ಯೂಸರ್ ಆರ್ತನಾದ ಮಾಡುತ್ತಾ ಕೆಳಗೆ ಬಿದ್ದನು.

ಅತ್ತಕಡೆ ಕುದುರೆಯ ಮೇಲೆ ಹೋಗುತ್ತಿದ್ದ ಲೆಫ್ಟಿನೆಂಟ್‌ಬಾಗ್ ಪಾಂಡಿಯನ್ನೂ ಗುಂಡಿನ ಶಬ್ದವನ್ನೂ ಫಿರಂಗಿಯವನ ಆರ್ತನಾದವನ್ನೂ ಕೇಳಿ ಮೈದಾನಕ್ಕೆ ಬಂದನು. ಪಾಂಡಿಯು ಅವನ ಕಡೆಗೂ ಗುಂಡು ಹಾರಿಸಿದನು. ಆ ಪೆಟ್ಟು ಕುದುರೆಗೆ ತಗುಲಿ ಆ ಪ್ರಾಣಿಯು ಕೆಳಗೆ ಬಿದ್ದು ಅಸುವನ್ನು ನೀಗಿತು.

ಅದರ ಮೇಲಿದ್ದ ಸ್ಥೂಲಾಕಾರನಾದ ಭೋಗ್ ಸಹ ಕೆಳಗೆ ಬಿದ್ದನು ಆದರವನು ಹಿಂಜರಿಯದೇ ಸೊಂಟದಲ್ಲಿದ್ದ ಪಿಸ್ತೂಲು ತೆಗೆದು ಪಾಂಡಿಯ ಕಡೆಗೆ ಹಾರಿಸಿದನು. ದೈವವಶಾತ್ ಅದು ಆ ಸ್ವಾತಂತ್ರವೀರನಿಗೆ ತಗುಲದೇ ಗುರಿ ತಪ್ಪಿತು.

ಕೂಡಲೇ ಮಿಂಚಿನಂತೆ ಮುಂದೆ ಹಾರಿ ಪಾಂಡಿಯು ಭೋಗ್‌ನನ್ನು ಖಡ್ಗದಿಂದ ಎದುರಿಸಿದನು. ಆ ಫರಂಗಿಯವನು ಹಾಗೆ ಹಠಾತ್ತಾಗಿ ಎದುರಾಳಿಯನ್ನು ನಿರೀಕ್ಷಿಸಿರಲಿಲ್ಲ. ಅವನು ಪಾಂಡಿಯ ಖಡ್ಗಪ್ರಹಾರಕ್ಕೆ ಆಹುತಿಯಾದನು.

ಅಷ್ಟರಲ್ಲಿ ಮತ್ತೊಬ್ಬ ಆಂಗ್ಲ ಸೈನಿಕನು ಬಂದು ಪಾಂಡಿಯನ್ನು

ಎದುರಿಸಿದನು. ಅವನೂ ಸಹ ತನ್ನವರ ಮಾರ್ಗವನ್ನು ಹಿಡಿಯಲು ತೊಡಗಿರುವಾಗ ದೇಶೀ ಸೀಪಾಯಿಯೊಬ್ಬನು ಪಾಂಡಿಯ ಮೇಲೆ ಆಕ್ರಮಣ ಮಾಡಲು ಹೋದನು.

ಸೀಪಾಯಿಗಳೆಲ್ಲರೂ ಉಚ್ಚಕಂಠದಿಂದ "ಮಂಗಳ ಪಾಂಡಿಯನ್ನು ಮುಟ್ಟಬೇಡಿರಿ! ಪಾಂಡಿಯನ್ನು ಯಾರಾದರೂ ಸೀಪಾಯಿಯು ಆಕ್ರಮಣ ಮಾಡಿದರೆ ಆ ದೇಶದ್ರೋಹಿಯು ನರಕದ ದಾರಿಯನ್ನು ಹಿಡಿಯಬೇಕಾಗುತ್ತದೆ" ಎಂದು ಕೂಗಿದರು.

ಮೈದಾನದಲ್ಲಿ ಪಾಂಡಿಯ ಗಲಾಟೆಯೇ ಗಲಾಟೆಯಾಗಿದ್ದಿತು. ಮೂರು ಮಂದಿ ಫಿರಂಗಿಗಳು ಅವನ ಎದುರಿನಲ್ಲಿ ಸತ್ತು ಬಿದ್ದಿದ್ದರು. ಕವಾಯ್ತು ಮೈದಾನದ ಒಂದು ಕಡೆ ಕರ್ನಲ್ ವೀಲರ್ ಸಾಹೇಬನ ಬಂಗಲೆ! ಅವನು ಬಂಗಲೆಯ ಮಹಡಿಯ ಮೇಲೆ ನಿಂತು ದುರ್ಬೀನಿನಿಂದ ಕವಾಯ್ತು ಮೈದಾನದ ಕಡೆಗೆ ನೋಡಿದನು. ಕೂಡಲೇ ಕೆಳಗಿಳಿದು ಎರಡು ಕೈಗಳಲ್ಲಿಯೂ ಪಿಸ್ತೂಲುಗಳನ್ನೂ ಹಿಡಿದು ಅಲ್ಲಿಗೆ ಬಂದನು. ಇದೇನು ಗಲಾಟೆ? ಇವರು ಯಾಕೆ ಮೃತರಾಗಿದ್ದಾರೆ?" ಎಂದು ಕೇಳಿದನು.

ಯಾರೂ ಅವನ ಮಾತಿಗೆ ಉತ್ತರ ಹೇಳಲಿಲ್ಲ. ಮಂಗಳ ಪಾಂಡಿಯು ಅವನ ಕಡೆಗೆ ತಿರುಗಿ–"ಫರಂಗಿಯವರು ಹಿಂದೂಸ್ಥಾನದಿಂದ ಹೊರಟುಹೋಗಬೇಕಾದ ಕಾಲವು ಸನ್ನಿಹಿತವಾಗಿದೆ. ಹೋಗದವರು ಇಲ್ಲಿ ಕೊಲೆಮಾಡಲ್ಪಡುತ್ತಾರೆ. ಹಾಗೆ ಕೊಲೆಮಾಡಲ್ಪಡುವರಲ್ಲಿ ಇವರು ಮೊದಲನೆಯ ಮೂರುಮಂದಿ. ಇವರನ್ನು ಕೊಲೆಮಾಡಿ ಕ್ರಾಂತಿಯನ್ನು ಆರಂಭಿಸಿದವನು ನಾನು"–ಎಂದು ಎದೆ ತಟ್ಟಿ ಹೇಳಿದನು.

ಕರ್ನಲ್ ವೀಲರ್ ಅವನ ಕಡೆಗೆ ನೋಡಿದನು. ಸಭ್ಯನಾಗಿದ್ದ ಪಾಂಡಿಯು ಇಂದು ರಕ್ತರಂಜಿನಾದ ಖಡ್ಗವನ್ನೂ ರಕ್ತ ಸಿಂಚಿತವಾದ ವಸ್ತ್ರಗಳನ್ನೂ ಧರಿಸಿ ರೌದ್ರಾವತಾರದಿಂದ ನಿಂತಿರುವುದನ್ನು ನೋಡಿ ಅವನಿಗೊಂದು ಬಗೆಯಾದ ಕೌತುಕವುಂಟಾಯಿತು. ಮರುಕ್ಷಣದಲ್ಲಿಯೇ ಅವನಿಗೆ ಕೋಪವು ಬಂದಿತು.

ವೀಲರ್ ಇತರ ಸೀಪಾಯಿಗಳ ಕಡೆಗೆ ನೋಡಿ-"ಇವನನ್ನೂ ವಸ್ತಗಿರಿಮಾಡಿರಿ"–ಎಂದು ಹೇಳಿದನು.

ಸೀಪಾಯಿಗಳು ಮಾತನಾಡಲಿಲ್ಲ. ಅವರು ಅಚಂಚಲವಾಗಿ ನಿಂತಿದ್ದರು.

ವೀಲರ್ ಉನ್ಮತ್ತನಂತೆ ಕೂಗಿದನು. "ಸೀಪಾಯಿಗಳೇ! ಈ ಕೊಲೆಗಡಿಗನನ್ನು ದಸ್ತಗಿರಿಮಾಡುವುದಿಲ್ಲವೇ? ನಿಮ್ಮ ಸೇನಾಧಿಪತಿಯ ಆಜ್ಞೆಯನ್ನು ಪರಿಪಾಲಿಸುವುದಿಲ್ಲವೇ?"

ಸೀಪಾಯಿಗಳು ಏಕ ಕಂಠದಿಂದ ಹೇಳಿದರು–"ಪವಿತ್ರನಾದ ಈ ಬ್ರಾಹ್ಮಣನ ಒಂದು ರೋಮವನ್ನು ಸಹ ನಾವು ಸ್ಪರ್ಶಮಾಡುವುದಿಲ್ಲ"

ವೀಲರ್ ಸಾಹೇಬನು ಮುಖ ಭಂಗಿತನಾದನು. ಅವನು ಅವನತ ಶಿರನಾಗಿ ತನ್ನ ಬಂಗಲೆಗೆ ಹಿಂತಿರುಗಿದನು.

ಸೇನಾಧಿಪತಿಯು ತನ್ನ ಬಂಗಲೆಗೆ ಹಿಂತಿರುಗಿದ ಹತ್ತು ನಿಮಿಷಗಳ ನಂತರ ಆ ಬಂಗಲೆಯಿಂದ ಇಪ್ಪತ್ತು ಮಂದಿ ಫರಂಗೀ ಸೈನಿಕರ ಸಹಿತನಾಗಿ ಜನರಲ್ ಹಾರ್ಸಿಯು ಮೈದಾನವನ್ನು ಪ್ರವೇಶಮಾಡಿದನು.

ಅವನು ಹತ್ತಿರಕ್ಕೆ ಬರುತ್ತಿದ್ದುದನ್ನು ನೋಡಿ ಮಂಗಳ ಪಾಂಡಿಯು ಸಹೋದರರೇ! ಮೇಲೇಳಿರಿ! ಹಿಂಜರಿಯಬೇಡಿರಿ" ಎಂದು ಕೈಗಳನ್ನೆತ್ತಿ ಕೂಗಿ ಕೊಂಡನು.

ಮಂಗಳ ಪಾಂಡಿಯು ಉಚ್ಚರಿಸಿದ ಪ್ರತಿಯೊಂದು ಶಬ್ದಶ್ರವಣದಿಂದಲೂ ಆ ಸೀಪಾಯಿಗಳಲ್ಲಿ ವಿದ್ಯುತ್ಸಂಚಾರವಾಯಿತು. ಅವರಿಗೆ ರೋಮಾಂಚವಾಯಿತು. ಅವರಿಗೆ ಆವೇಶವು ಬಂದಂತೆ ಆಯಿತು. ಆದರೆ ನಾಯಕನ ಅಪ್ಪಣೆಯಿಲ್ಲದೇ ಮುಂದುವರಿಯಲಾರದೇ ಅವರು ಮಹಾಸರ್ಪಗಳಂತೆ ಬುಸುಗುಟ್ಟುತ್ತಾ ನಿಂತಿದ್ದರು.

ತನ್ನ ಜೊತೆಯ ಸೀಪಾಯಿಗಳು ಸಹಾಯಕ್ಕೆ ಬರಲಿಲ್ಲ. ತನ್ನನ್ನು ದಸ್ತಗಿರಿಮಾಡಲು ಹಾರ್ಸಿಯು ಫರಂಗೀ ಸೈನಿಕರೊಡನೆ ಬರುತ್ತಾ ಇದ್ದಾನೆ. ಇದನ್ನು ನೋಡಿ ಪಾಂಡಿಯು ತಾನು ಅವರಿಗೆ ಸೆರೆಸಿಕ್ಕಬೇಕಾಗುವುದೆಂದು ಭಾವಿಸಿದನು. ಶತ್ರುಗಳಾದ ಫರಂಗೀಯವರಿಗೆ ಕೈಸೆರೆ ಸಿಕ್ಕುವುದಕ್ಕಿಂತಲೂ ಸಾಯುವುದು ಆ ವೀರನಿಗೆ ಹಿತಕರವಾಗಿ ಕಂಡಿತು. ಅವನು ರೈಫಲ್ ತನ್ನ ಎದೆಗಿಟ್ಟುಕೊಂಡು ಅದನ್ನು ಹಾರಿಸಿ–ಪ್ರಿಯವಾದ ಯಾವ ಭೂಮಿಗಾಗಿ ಆ ವೀರನ ಆತ್ಮವು ಅಷ್ಟು ಸ್ವಾರ್ಥತ್ಯಾಗದಿಂದ ಉಜ್ವಲಿಸಿತೋ ಆ ಭೂಮಿಯನ್ನು ಆಲಂಗಿಸಿ ಮಲಗಿದನು.

ಹಾರ್ಸಿಯೂ ಮತ್ತು ಆಂಗ್ಲ ಸೀಪಾಯಿಗಳೂ ಆತನ ಬಳಿಗೆ ಬಂದರು. ಅವನ ಶರೀರವನ್ನು ಆಸ್ಪತ್ರೆಗೆ ತೆಗೆದುಕೊಂಡು ಹೋದರು.

ಆದರೆ ದೈವ ವಿಲಾಸವು ಬೇರೊಂದು ವಿಧವಾಗಿದ್ದಿತು. ವಿಪ್ಲವ ಕಾರರಿಗೆ ಯಾರ ಪವಿತ್ರವಾದ ಹೆಸರು ಉಪನಾಮವಾಯಿತೋ ಯಾವ ಮಹಾಪುರುಷನು ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದಲ್ಲಿ ತನ್ನ ಆತ್ಮವನ್ನು ತ್ಯಾಗಮಾಡಿದನೋ ಅವನು ದೇಶಪ್ರೇಮಿಗೆ ಉಚಿತವಾದ ರೀತಿಯಲ್ಲಿ ಅಸುವನ್ನು ನೀಗದೇ ತನ್ನ ಗುಂಡಿನ ಬಾಯಿಗೆ ತಾನೇ ಬಲಿ ಯಾಗುವುದು ವಿಧಾತನ ಸಂಕಲ್ಪದಲ್ಲಿರಲಿಲ್ಲ. ಎಂಟು ದಿನಗಳ ಒಳಗಾಗಿ ಮಂಗಳ ಪಾಂಡಿಯು ಗುಣ ಹೊಂದಿದನು.

ಮಂಗಳಪಾಂಡಿಯು ಆರೋಗ್ಯ ಹೊಂದಿದ ಮೇಲೆ ಫರಂಗೀ ಅಧಿ ಕಾರಿಗಳು ಅವನಿಗೆ ಮಹತ್ತರವಾದ ಆಸೆಗಳನ್ನು ತೋರಿದರು. ಕ್ರಾಂ ತಿಯು ಯಾರಿಂದ ಉಜ್ವಲವಾಗುತ್ತಿದೆಯೋ ಸೀಪಾಯಿಗಳಲ್ಲಿ ಯಾರು ಯಾರು ಸೇರಿದ್ದಾರೆಯೋ ಅವುಗಳನ್ನು ಹೇಳುವುದಾದರೆ ಪ್ರಾಣದಾನ ಮಾಡುವುದಾಗಿ ತಿಳಿಸಿದರು. ಪಾಂಡಿಯು ಅದನ್ನು ತಿರಸ್ಕರಿಸಿದನೆಂದು ಹೇಳಬೇಕಾದ ಅವಶ್ಯಕತೆಯೇ ಇಲ್ಲ. ಯಾಕೆಂದರೆ ಅವನಂತಹ ವೀರನು ಹಾಗಲ್ಲದೇ ಇನ್ನೇನು ತಾನೇ ಮಾಡಿಯಾನು ?

ಕೋರ್ಟ್ ಮಾರ್ಷಲ್ ವಿಚಾರಣೆಯಾಗಿ ಪಾಂಡಿಗೆ ಮರಣದಂಡನೆ ಯನ್ನು ವಿಧಿಸಿದರು. ಸೀಪಾಯಿಗಳ ಶೌರ್ಯದ ಆದರ್ಶ ಮೂರ್ತಿ ಯಾದ ಪಾಂಡಿಯನ್ನು ನೇಣುಹಾಕಲು ಬ್ಯಾರಕ್‌ಪುರದಲ್ಲಿ ಯಾವ ಪಾಪಿಯೂ ಮುಂದೆ ಬರಲಿಲ್ಲ. ಪ್ರದೇಶಾಂತರದಿಂದ ಕೊಲೆಗಡುಕರನ್ನು ಕರಸಿ ಅವನನ್ನು ಗಲ್ಲಿನ ಮರದ ಮೇಲೆ ಹತ್ತಿಸಿದರು.

ಗಲ್ಲಿನ ಮರದ ಮೇಲೆ ಪಾಂಡಿಯು ನಿಶ್ಚಲನಾಗಿ ನಿಂತಿರುವಾಗ ಪಕ್ಕದಲ್ಲಿದ್ದ ಫರಂಗೀ ಅಧಿಕಾರಿಯು "ನೀನು ಕ್ರಾಂತಿಯ ವಿವರ ಗಳನ್ನು ಹೇಳುವುದಾದರೆ ಈಗಲೂ ನಿನಗೆ ಪ್ರಾಣದಾನವನ್ನು ಮಾಡಲಾ ಗುವುದು" ಎಂದು ಹೇಳಿದನು.

ಮಂಗಳಪಾಂಡಿಯು ಕಡೆಯಬಾರಿ ಅದನ್ನು ತಿರಸ್ಕರಿಸಿ "ಭಾರತದ ಕ್ರಾಂತಿಗೆ ವಿಜಯವಾಗಲಿ" ಎಂದು ಕೂಗಿದನು.

ಮರುಕ್ಷಣದಲ್ಲಿ ಪಾಂಡಿಯು ವೀರಸ್ವರ್ಗವನ್ನು ಸೇರಿದನು.

## ಅರುಣ ಜನನ

ಮಂಗಳ ಪಾಂಡಿಯು ನಶ್ವರವಾದ ಶರೀರವನ್ನು ತ್ಯಾಗಮಾಡಿ ಅಮರನಾದನು. ಹಿಂದೂಸ್ಥಾನದಲ್ಲಿ ಫರಂಗಿಗಳಿಗೆ ಅವನು ಸಿಂಹ ಸ್ವಪ್ನ ನಾದನು. ಫರಂಗಿಯುವರು ವಿಪ್ಲವಕಾರರನ್ನು ಪಾಂಡಿಗಳೆಂದು ಕರೆಯು ತ್ತಿದ್ದರೆಂದರೆ ಅವನಿಂದ ಅವರು ಎಷ್ಟು ಕಳವಳಗೊಂಡಿದ್ದರೆಂಬುದನ್ನು ಸುಲಭವಾಗಿ ಊಹಿಸಬಹುದು !

ಇಷ್ಟಾದರೂ ಪಾಂಡಿಯ ಅಪ್ರತಿಮವಾದ ತ್ಯಾಗವು ಮಹಾ ಕ್ರಾಂತಿಗೆ ಸ್ವಲ್ಪ ಘಾತವನ್ನು ಉಂಟುಮಾಡಿತೆಂದೇ ಹೇಳಬೇಕು. ಇದ ರಿಂದ ಫರಂಗೀ ಅಧಿಕಾರಿಗಳು ಸ್ವಲ್ಪ ಮಟ್ಟಿಗೆ ಜಾಗೃತರಾದರು. ಮುಂದೆ ಭಾರತದಲ್ಲಿ ತಮಗೆ ಎಂತಹ ಕಷ್ಟಕಾಲವಿದೆ-ಎಂಬುದನ್ನು ಅವರು ಊಹೆ ಮಾಡಲು ಇದರಿಂದ ಸಾಧ್ಯವಾಯಿತು. ಅವರು ಬಹಳ ಎಚ್ಚರಿಕೆಯಿಂದ ದೇಸೀಸೀಪಾಯಿಗಳ ಚಲನವಲನಗಳನ್ನು ಗಮನಿಸ ತೊಡಗಿದರು. ಇದು ಕೇವಲ ಬ್ಯಾರಕ್ ಪುರದಲ್ಲಿ ಮಾತ್ರವಲ್ಲ ಸಮಗ್ರ ಹಿಂದೂಸ್ಥಾನದಲ್ಲಿ ರುವ ಫರಂಗಿಯವರೆಲ್ಲರೂ ಗಮನಿಸುವಂತೆ ಮಾಡಿತು.

ಕುಂಪಣಿಯುವರ ಮೀರತ್ ಮಿಲ್ಟ್ರಿ ಕೇಂದ್ರವು ಭಾರತದಲ್ಲೆಲ್ಲಾ ಪ್ರಖ್ಯಾತವಾದುದು. ಅಲ್ಲಿ ಫರಂಗಿಯುವರು ತಮ್ಮ ಸೈನ್ಯಗಳನ್ನು ವಿಪು ಲವಾಗಿ ಸಂಗ್ರಹಿಸಿದ್ದರು. ಅವರ ಹೆಸರಾದ ಫಿರಂಗಿ ಪಡೆಯೂ ಬಲ ವಾದ ಕುದುರೆಯ ಸೈನ್ಯವೂ ಅಲ್ಲಿಯೇ ಇದ್ದವು.

ಮೀರತ್‌ನ ಮಿಲ್ಟ್ರಿ ಕೇಂದ್ರವು ಐದು ಮೈಲಿಗಳ ವಿಸ್ತಾರವಾದ ಮೈದಾನ ಒಂದರಲ್ಲಿ ರಚಿತವಾಗಿದ್ದಿತು. ಅವರ ಮಧ್ಯದಲ್ಲಿ ಒಂದು ಕಾಲುವೆ. ಅದರ ಬಲ ಪಕ್ಕದಲ್ಲಿ ಇಂಗ್ಲೀಷ್ ಸೈನ್ಯಗಳು. ಎಡಪಕ್ಕದಲ್ಲಿ ದೇಸೀಸೀಪಾಯಿಗಳು. ಒಂದು ಕಡೆ ಸಣ್ಣ ಅರಣ್ಯದ ಪಕ್ಕದಲ್ಲಿ ಸುಸ ಜ್ಜಿತವಾದ ಬ್ಯಾರಕ್‌ಗಳು ! ಭವ್ಯವಾದ ಭವನಗಳು ! ಮತ್ತೊಂದು ಕಡೆ ಕುದುರೆಗಳ ತಬೇಲಿ ! ಅವುಗಳ ಹಿಂದೆ ಸಣ್ಣ ಗುಡಿಸಲುಗಳು. ಅವುಗಳ ಆಚೆ ಮೀರತ್‌ನ ಹೊಲಗೇರಿಯಂತೆ ಕಂಡು ಬರುವ ಭಾಗ.

ಮೀರತ್ ನಗರದ ಈ ಕೇಂದ್ರವನ್ನು ನೋಡಿದರೆ ಕುಂಪಣಿಯ ಅಧಿಕಾರಿಗಳು ಫರಂಗೀ ಸೈನಿಕರಿಗೂ ದೇಸೀಸೀಪಾಯಿಗಳಿಗೂ ಎಷ್ಟು

ಭೇಧವನ್ನು ಮಾಡಿದ್ದರೆಂಬುದು. ಕಣ್ಣಿಗೆ ಕಟ್ಟಿದಂತೆ ಕಂಡುಬರುತ್ತದೆ. ಸಾಯಂಕಾಲವಾದ ನಂತರ ಆ ವ್ಯತ್ಯಾಸವು ಎದ್ದು ಕಾಣುತ್ತದೆ. ಬಲ ಭಾಗದಲ್ಲಿ ದೇದೀಪ್ಯಮಾನವಾದ ದೀಪ ಪ್ರಕಾಶ! ವಿಹಾರ ಸ್ಥಾನಗಳಿಂದ ಕೇಳಿ ಬರುವ ಸುಶ್ರಾವ್ಯವಾದ ಸಂಗೀತ. ಫರಂಗಿಯವರ ಹರ್ಷದ ಕೋಲಾಹಲ ಧ್ವನಿ! ಇವುಗಳು ಅದನ್ನೊಂದು ಸ್ವರ್ಗದಂತೆ ಮಾಡುತ್ತವೆ. ಇತ್ತಕಡೆಯಲ್ಲಿ ಸೀಪಾಯಿಗಳ ಬ್ಯಾರಕ್‌ಗಳಲ್ಲಿ ಮಿಣುಗುಟ್ಟುವ ದೀಪಗಳು! ಸ್ಮಶಾನ ಮೌನ! ಒಂದೊಂದು ಬಾರಿ ಗೂಬೆಗಳು ಕೂಗಿದಂತೆ ತೋರುವ ಕೂಗುಗಳು! ಇವುಗಳಿಂದ ಅದು ನರಕದಂತೆ ಭಾಸವಾಗುತ್ತದೆ. ಮಧ್ಯದಲ್ಲಿ ಕಾಲುವೆಯು ಇವೆರಡನ್ನೂ ವಿಭಾಗಿಸಿ ಗಾಂಭೀರ್ಯದಿಂದ ಹರಿಯುತ್ತದೆ.

ದೇಶದಲ್ಲಿ ಕ್ರಾಂತಿಯು ಸಂಘಟಿತವಾಗುತ್ತಿದೆ-ಎಂಬ ಸಂದೇಹವು ಫರಂಗಿಗಳಿಗೆ ಮೂರು-ನಾಲ್ಕು ತಿಂಗಳಿಂದಲೂ ಇತ್ತು. ಮಂಗಳ ಪಾಂಡಿಯ ವೀರೋದಾತ್ತ ಮರಣದಿಂದ ಅದು ಸ್ಥಿರಗೊಂಡಿತ್ತು. ಬರ್ಮಾದಿಂದ ಫರಂಗಿ ಪಡೆಗಳು ಬಂದಕೂಡಲೇ ಕುಂಪಣಿಯ ಅಧಿಕಾರಿಗಳಿಗೆ ಹಿಮ್ಮತ್ತು ಬಂದ ಹಾಗಾಯಿತು. ಸುಬೇದಾರ್ ಹರಿಸಿಂಗನು ರಾತ್ರಿಯ ಹೊತ್ತು ಕ್ರಾಂತಿ ಸಭೆಗಳನ್ನು ನಡೆಸುತ್ತಾನೆಂದು ಆರೋಪಣೆಗಳನ್ನು ತಂದರು. ಕೋರ್ಟ್‌ಮಾರ್ಷಲ್ ವಿಚಾರಣೆ ಮಾಡಿದರು. ಆ ವೀರನನ್ನು ಗುಂಡಿನ ಬಾಯಿಗೆ ಕಟ್ಟಿದರು. ೩೪ ನೇ ಮತ್ತು ೧೯ ನೇ ರಿಜಿಮೆಂಟುಗಳನ್ನು ವಜಾಮಾಡಿದರು.

ಪ್ರಬಲಸ್ಥಾನವಾದ ಮೀರತ್‌ನಲ್ಲೊಂದು ಬಾರಿ ಬಲಪ್ರದರ್ಶನವನ್ನು ಮಾಡಿ ನೋಡಬೇಕೆಂದೂ ದೇಸೀಸೀಪಾಯಿಗಳನ್ನು ದಮನಮಾಡಬೇಕೆಂದೂ ಫರಂಗೀ ಅಧಿಕಾರಿಗಳಿಗೆ ತೋರಿತು. ದೇಸೀಸೀಪಾಯಿಗಳ ಸೇನಾಧಿಪತಿಯಾದ ಕರ್ನಲ್ ಸ್ಮಿತ್ ಅಂತಹ ಪೌರುಷವನ್ನು ಮಾಡಲು ಸಂಕಲ್ಪಮಾಡಿದನು. ಆದಿನ ಮೂರನೆಯ ಕುದುರೆ ಸೈನಿಕರ ಕವಾಯಿತ್ ಕವಾಯಿತ್ ಮೈದಾನದಲ್ಲಿ ಎಂಬತ್ತೈದು ಮಂದಿ ಸೀಪಾಯಿಗಳು ಸಾಲಾಗಿ ನಿಂತಿದ್ದರು. ಕವಾಯಿತ್ ಆದನಂತರ ಕರ್ನಲ್ ಸ್ಮಿತ್ ಬಂದು ನಿಂತನು. "ಸೀಪಾಯಿಗಳೇ! ತೋಟಾಗಳಲ್ಲಿ ಹಸು ಮತ್ತು ಹಂದಿಯ ಕೊಬ್ಬಿದೆ-ಎಂದು ಹೇಳುವುದು ಸುಳ್ಳು! ಸ್ವಾರ್ಥದಿಂದ

ಹಲವರು ಸೀಪಾಯಿಗಳಲ್ಲಿ ಈ ಭ್ರಾಂತಿಯನ್ನು ಹಬ್ಬಿಸಿದ್ದಾರೆ. ಮೂವತ್ತು ನಲವತ್ತು ವರ್ಷಗಳಿಂದ ತೋಟಾಗಳಿಗೆ ಯಾವ ಜಿಡ್ಡನ್ನು ಹಚ್ಚಲಾಗುತ್ತಿದೆಯೋ ಈಗಲೂ ಅದೇ ಜಿಡ್ಡನ್ನು ಹಚ್ಚಲಾಗುತ್ತಿದೆ. ಅದನ್ನು ನೀವು ಉಪಯೋಗಿಸುವುದಕ್ಕೆ ಯಾವ ಅಭ್ಯಂತರವೂ ಇಲ್ಲ. "ಎಂದುಹೇಳಿದನು.

ಹವಾಲ್ದಾರ್ ಮತ್ತಾದೀ ಸಿಂಗನು ಸ್ವಲ್ಪ ಮುಂದೆ ಬಂದು "ಅದರಲ್ಲಿ ಹಸು ಮತ್ತು ಹಂದಿಗಳ ಕೊಬ್ಬಿದೆ ಎಂದು ಹಿಂದೂಸ್ಥಾನದಲ್ಲೆಲ್ಲಾ ಜನಜನಿತವಾಗಿದೆ! ಅದನ್ನು ನಾವು ನಂಬದಿರುವುದು ಹೇಗೆ?" ಎಂದು ಕೇಳಿದನು.

"ನಾನು ಅದರಲ್ಲಿ ಆಕ್ಷೇಪಣೀಯವಾದುದಿಲ್ಲವೆಂದು ಹೇಳುತ್ತಿದ್ದೇನೆ. ಆದರಿಂದ ನೀವು ನನ್ನ ಮಾತನ್ನು ನಂಬಿರಿ!"

"ಕರ್ನಲ್ ಸಾಹೇಬರೇ! ನೀವು ತೋಟಾಗಳ ಜಿಡ್ಡು ನಿರ್ದೋಷಯುಕ್ತವಾದುದೆಂದು ವಾದಿಸುತ್ತೀರಿ! ಅದನ್ನು ನಾವು ಉಪಯೋಗಿಸಬೇಕೆಂದು ಬಲಾತ್ಕಾರ ಮಾಡಲು ಪ್ರಯತ್ನ ಮಾಡುತ್ತಿದ್ದೀರಿ! ಅದೇ ನಮ್ಮ ಸಂದೇಹವನ್ನು ಹೆಚ್ಚಿಸುತ್ತಾ ಇದೆ. ನಾವು ಕೇಳಿರುವ ವರ್ತಮಾನವನ್ನು ಸಾಬೀತು ಮಾಡುತ್ತಿದೆ.

"ಖಾಮೋಷ್! ಹಾಗೆಲ್ಲಾ ಮಾತನಾಡಬಾರದು! ಒಂದು ವೇಳೆ ಹಸು ಮತ್ತು ಹಂದಿಗಳ ಕೊಬ್ಬು ಅದರಲ್ಲಿದೆ ಎಂದೇ ಇಟ್ಟುಕೊಳ್ಳಿರಿ! ಅದನ್ನು ಕಚ್ಚುವುದಲ್ಲವೇ ಆಕ್ಷೇಪಕರವಾದುದು. ಅದನ್ನು ನೆಕ್ಕುವುದಲ್ಲವೇ ನಿಮಗೆ ಆಕ್ಷೇಪಕರವಾದುದು. ಅದನ್ನು ಕಚ್ಚದೇ ನೆಕ್ಕದೇ ಬಂದೂಕಿಗೆ ಹಾಕಿ ಹೊಡೆಯುವುದನ್ನು ನಾನು ತೋರಿಸುತ್ತೇನೆ. ಅದಕ್ಕಾಗಿಯೇ ನಾನು ಈದಿನ ಬಂದಿದ್ದೇನೆ."

"ಇಲ್ಲ! ಅದನ್ನು ಮುಟ್ಟುವುದು ಸಹ ಆಕ್ಷೇಪಣೀಯವಾದುದು"

"ನಾನು ಹೇಳುತ್ತೇನೆ. ನೀವು ಆ ತೋಟಾಗಳನ್ನು ಬಂದೂಕಿಗೆ ಹಾಕಿ ಹಾರಿಸಲೇ ಬೇಕು. ಸೈನಿಕರಿಗಿರ ಬೇಕಾದ ಶಿಸ್ತಿನಿಂದ ನಾನು ನಿಮ್ಮನ್ನು ಬಲಾತ್ಕಾರ ಮಾಡುತ್ತೇನೆ"

"ಸ್ವಧರ್ಮಕ್ಕೆ ಘಾತವಾಗುವಂತಹ ಯಾವ ಆಜ್ಞೆಯನ್ನೂ ನಾವು ಪಾಲಿಸುವುದಿಲ್ಲ. ಹಿಂದೂಸ್ಥಾನದ ಸಮಸ್ತ ಸೀಪಾಯಿಗಳನ್ನೂ ಜಾತಿ ಬಾಹಿರರನ್ನಾಗಿ ಮಾಡಬೇಕೆಂದಿರುವ ಪಾದರಿಗಳ ತಂತ್ರಕ್ಕೆ ನಾವು

ಬಲಿಯಾಗುವುದಿಲ್ಲ "ಎಂದು ಸೀಪಾಯಿಗಳೆಲ್ಲರೂ ಕೂಗಿಕೊಂಡರು.

ಆದರೆ ಕರ್ನಲ್ ಸ್ಮಿತ್ ಅವರನ್ನು ಲಕ್ಷ್ಯಮಾಡಲಿಲ್ಲ. ಅವರ ಕೂಗುಗಳು ಅವನ ಕಿವಿಯ ಮೇಲೆ ಬೀಳಲಿಲ್ಲ. ಅಲ್ಲಿದ್ದ ಫರಂಗೀ ಸೈನಿಕ ನೊಬ್ಬನನ್ನು ಕರೆದು–"ಇವರಿಗೆಲ್ಲಾ ತಲಾ ಮೂರು ಮೂರು ತೋಟಾ ಗಳನ್ನು ಕೊಡು" ಎಂದನು.

ಸೀಪಾಯಿಗಳ ಕಡೆಗೆ ತಿರುಗಿ "ನೀವು ಅದನ್ನು ಕಚ್ಚಬೇಕಾಗಿಲ್ಲ. ನೆಕ್ಕಬೇಕಾಗಿಲ್ಲ. ಇದನ್ನು ಹಾಗೆಯೇ ಬಂದೂಕಿಗೆ ಹಾಕಿರಿ" ಎಂದು ಆಜ್ಞೆಮಾಡಿದನು.

ಸ್ಮಿತ್‌ನ ಅಪ್ಪಣೆಯಂತೆ ಸೈನಿಕನು ತೋಟಾಗಳನ್ನು ಸೀಪಾಯಿಗಳ ಮುಂದೆ ಕೊಂಡು ಹೋದನು. ಎಲ್ಲರೂ ಅದನ್ನು ಸ್ಪರ್ಶಮಾಡಲು ತಿರಸ್ಕ ರಿಸಿದರು. ಯಾರೂ ಅದನ್ನು ತೆಗೆದುಕೊಳ್ಳಲಿಲ್ಲ. ಅಲ್ಲಿಗೆ ಅಂದಿನ ಕವಾಯಿತ್ ಮುಗಿಯಿತು. ಮಾರನೆಯ ದಿನ ಕರ್ನಲ್ ಸ್ಮಿತ್ ಆಸೈನ್ಯ ಶಿಬಿರದ ಅಧಿಕಾರಿಗೆ ಹೇಳಿ ಒಂದು ಮಾರ್ಷಲ್ ಕೋರ್ಟ್ ಏರ್ಪಡಿಸಿ ದನು. ಈ ಎಂಬತ್ತೈದು ಮಂದಿಯನ್ನು ವಿಚಾರಣೆಗೆ ಗುರಿಪಡಿಸಿದನು.

ಈ ಕೋರ್ಟ್ ಮಾರ್ಷಲ್ ವಿಚಾರಣೆಯು ಮೂರು ದಿನಗಳ ಕಾಲ ನಡೆಯಿತು. ನ್ಯಾಯಾಧೀಶರು ಆಪಾದಿತರಿಗೆ ತಲಾ ಹತ್ತು ವರ್ಷಗಳ ಕಠಿಣಶಿಕ್ಷೆಯನ್ನು ವಿಧಿಸಿದರು. ಡಿವಿಷನ್ ಕಮಾಂಡ್ ಅಧಿಕಾರಿಯಾದ ಹೇವಿಟ್ ಇದನ್ನು ಖಾಯಂಮಾಡಿದನು.

ಪ್ರಾತಃಕಾಲ ಒಂಬತ್ತು ಗಂಟೆಯಿರಬಹುದು. ಕವಾಯಿತ್ ಮೈದಾನದಲ್ಲಿ ಸಹಸ್ರಾರು ಮಂದಿ ಸೈನಿಕರು ನೆರೆದಿದ್ದಾರೆ. ಸುತ್ತಲೂ ಭಯಂಕರವಾದ ಫಿರಂಗಿಗಳನ್ನು ನಿಲ್ಲಿಸಿದ್ದಾರೆ. ಯಾವ ಕ್ಷಣದಲ್ಲೆಂದರೆ ಆಕ್ಷಣದಲ್ಲಿ ಅವುಗಳನ್ನು ಹಾರಿಸಲು ಏರ್ಪಾಡು ಮಾಡಿದ್ದಾರೆ. ರೈಫಲ್ಸ್ ಗಳನ್ನು ಕೊಟ್ಟು ಫರಂಗೀ ಸೈನಿಕರನ್ನು ನಿಲ್ಲಿಸಿದ್ದಾರೆ. ಸ್ವಲ್ಪ ಪ್ರತಿರೋ ಧವು ಕಂಡರೂ ಕಾರ್ಯಾಚರಣೆಯನ್ನು ಕೈಗೊಳ್ಳಲು ಫರಂಗೀ ಸೈನಿ ಕರಿಗೆ ಆಜ್ಞೆಮಾಡಿದ್ದಾರೆ.

ಆ ಬಿಳಿಯ ಸೈನಿಕರ ಎದುರಿನಲ್ಲಿ ದೇಶೀ ಸೀಪಾಯಿಗಳು ನಿಂತಿ ದ್ದಾರೆ. ಉತ್ತಮವಾದ ಆಯುಧ ವಿಶೇಷಗಳಿಲ್ಲದೇ ಅವರು

ಪೇದೆಗಳಂತಿದ್ದಾರೆ. ಇಂಗ್ಲಿಷರು ನಿರ್ಮಾಣಮಾಡಿದ್ದಂತಹ ಭಯ ಪ್ರದರ್ಶನವನ್ನು ನೋಡುತ್ತಾ ಇದ್ದಾರೆ.

ಇಂತಹ ಸಂದರ್ಭದಲ್ಲಿ ಬಾರುಮಾಡಿದ ಬಂದೂಕುಗಳನ್ನು ಹಿಡಿದ ಇನ್ನೂರು ಮಂದಿ ಫರಂಗೀ ಸೈನಿಕರ ಕಾವಲಿನಲ್ಲಿ ಎಂಬತ್ತೈದು ಮಂದಿ ವೀರರನ್ನು ಕವಾಯಿತ್ ಮೈದಾನಕ್ಕೆ ಕರತರಲಾಯಿತು. ಮಾರ್ಷಲ್ ಕೋರ್ಟಿನ ತೀರ್ಪನ್ನು ಅದರೆದುರಿಗೆ ಓದಲಾಯಿತು. ಅನಂತರ ಅವರ ಆಯುಧಗಳನ್ನು ಕಿತ್ತುಕೊಳ್ಳಲಾಯಿತು. ಅವರ ವಕ್ಷಸ್ಥಲದ ಮೇಲಿದ್ದ ಪ್ರಶಸ್ತಿ ಪದಕಗಳನ್ನು ಕಿತ್ತುಹಾಕಲಾಯಿತು. ಅವರ ಯೂನಿಫಾರಂ ಬಿಚ್ಚಿಸಿ ಖೈದಿಗಳ ಉಡುಪು ತೊಡಿಸಲಾಯಿತು. ಅವರ ಕೈಗಳಿಗೆಲ್ಲಾ ಕೋಳಗಳನ್ನು ಹಾಕಿದರು. ಈ ರೀತಿ ಅವರಾ ಸ್ವಾತಂತ್ರ್ಯ ಸಿಂಹಗಳನ್ನು ಬಂಧಿಸಿ ಸೆರೆಮನೆಗೊಯ್ದರು.

ಇತರ ದೇಸೀಸೀಪಾಯಿಗಳು ಇದನ್ನೆಲ್ಲಾ ನೋಡುತ್ತಾ ನಿಂತಿದ್ದರು ತಮ್ಮ ಸಹೋದರರಿಗಾದ ಅವಮಾನದಿಂದ ಅವರಿಗೆ ದುಃಖವಾಗಿತ್ತು ಅವರಿಗೆ ಕೋಪವು ಬಂದಿತ್ತು. ಅವರು ತಮ್ಮ ಭಾರವಾದ ಹೃದಯ ಗಳನ್ನು ಹೊತ್ತುಕೊಂಡು ಅವನತಶಿರರಾಗಿ ತಮ್ಮ ಬ್ಯಾರಕ್‌ಗಳಿಗೆ ಹೋದರು.

ಆದಿನ ಶನಿವಾರ! ಮೀರತ್‌ನಲ್ಲಿ ಅಂದು ಸಂತೆ. ತಮ್ಮ ಮನೆಗಳಿಗೆ ಬೇಕಾದ ಸಾಮಾನು ಸರಂಜಾಮುಗಳನ್ನು ತರಲು ಪ್ರತಿ ಸಂತೆಗೂ ಹೋಗುತ್ತಿದ್ದಂತೆ ಆದಿನವೂ ಸೀಪಾಯಿಗಳು ಹೋದರು. ಸಂತೆಯಲ್ಲಿ ಪ್ರತಿಯೊಬ್ಬರೂ ಇವರನ್ನು ನೋಡಿ ಅಣಕಿಸುವಂತಿತ್ತು. ವ್ಯಾಪಾರಿ ಗಳೆಲ್ಲರೂ ಇವರ ಮೇಲೆ ಸಾಮಾಜಿಕ ಬಹಿಷ್ಕಾರವನ್ನು ಹಾಕಿದಂತಿತ್ತು.

ನಾಲ್ಕುಮಂದಿ ಸೀಪಾಯಿಗಳು ಒಬ್ಬ ಮುದುಕಿಯ ಬಳಿ ಕಾಯಿ ಪಲ್ಯಗಳನ್ನು ಕೊಳ್ಳುವುದಕ್ಕೆ ಹೋದರು. ವ್ಯಾಪಾರ ಮಾಡುತ್ತಿದ್ದ ಮುದುಕಿಯು ಅವರ ಕಡೆಗೆ ನೋಡಿ–" ಮಕ್ಕಳೇ! ಮನೆಗೆ ಸಾಮಾನು ಗಳನ್ನು ತೆಗೆದುಕೊಂಡು ಹೋಗಲು ಸಂತೆಗೆ ಬಂದಿರಾ? ಸಾಮಾನು ಗಳನ್ನು ತೆಗೆದುಕೊಂಡು ಹೋಗಿ ಬೇಕಾದ್ದು ಅಡಿಗೆ ಮಾಡಿಸಿಕೊಂಡು ತಿಂದು ಸುಖವಾಗಿರುವುದಕ್ಕೆ ಬಂದಿರಾ? ನಿಮ್ಮ ಸಹೋದರರು ಜೈಲಿನಲ್ಲಿ ಗೋಧೀ ಬೀಸುತ್ತಿದ್ದರೆ, ಇರಲಿ. ನೀವು ಹೆಂಡರು ಮಕ್ಕಳೊಡನೆ

ಸುಖವಾಗಿ ಬದುಕಿರಿ" – ಎಂದು ಹೇಳಿ ಕಾಯಿಪಲ್ಯಗಳ ಮಕ್ಕರಿಯನ್ನು ತಲೆಯ ಮೇಲಿಟ್ಟು ಕೊಂಡುಹೊರಟು ಹೋದಳು.

ಆದಿನ ಸಂತೆಯಲ್ಲೆಲ್ಲಾ ಇದೇ ಮಾತು ! ಎಲ್ಲಕಡೆಯೂ ಈ ವರ್ತಮಾನವು ಹರಡಿ ಹೋಯಿತು. ಬಿರುಗಾಳಿಯಂತೆ ಮುದುಕಿಯ ಮಾತು ಸಂತೆಯಲ್ಲಿ ಹರಡುತ್ತಲೇ ಸೀಪಾಯಿಗಳು ಸಂತೆಯಿಂದ ವಾಪ್ಸು ಹೊರಟು ಹೋದರು.

ಆದಿನ ಮೇ ೯ ನೆಯ ತಾರೀಖು. ಸೀಪಾಯಿಗಳ ಮನಸ್ಸಿನಲ್ಲಿ ಅಲ್ಲ ಕಲ್ಲೋಲವಾಗಿತ್ತು. ಪ್ರಚಂಡವಾದ ಮಾರುತದಲ್ಲಿ ಕ್ರೂರವಾದ ನಾಗಸರ್ಪಗಳ ನಾಲಿಗೆಗಳಂತೆ ಏಳುವ ಅಲೆಗಳಲ್ಲಿ ತೇಲಿ ಹೋಗುತ್ತಿರುವ ನೌಕೆಯಂತೆ ಅವರ ಮನಸ್ಸು ಡೋಲಾಯಮಾನವಾಗಿತ್ತು. ಕ್ರಾಂತಿಯನ್ನು ಮೊದಲು ಮಾಡುವುದೇ ? ಮಾಡದಿರುವುದೇ ? ಬ್ರಹ್ಮಾವರ್ತದ ಅರಮನೆಯಿಂದ ಆದೇಶವು ಬಂದಿದೆ. ಮೇ ೩೧ ನೆಯ ತಾರೀಖಿನ ದಿನ ಕ್ರಾಂತಿಯನ್ನು ಆರಂಭಿಸ ಬೇಕೆಂದು ಹೇಳಲಾಗಿದೆ. ಈಗೇನು ಮಾಡುವುದು ? ಅಲ್ಲಿಯವರೆಗೆ ಕಾಯುವುದೇ ? ಇಪ್ಪತ್ತೆರಡು ದಿನಗಳು ಕಾಯುವುದೇ ? ಊರಿನಲ್ಲಿ ಜನಗಳು ಏನೆನ್ನುತ್ತಾರೆ. ಬೀದಿಗಳಲ್ಲಿ ಮುಖ ತೋರಿಸುವುದು ಹೇಗೆ ? ದಂಡಿನಲ್ಲಿ ಫರಂಗೀ ಅಧಿಕಾರಿಗಳ ಎದುರಿಗೆ ಫರಂಗೀ ಸೈನಿಕರ ಎದುರಿಗೆ ತಲೆ ಎತ್ತಿಕೊಂಡು ಓಡಿಯಾಡುವುದು ಹೇಗೆ ? ಅವರು ಏನು ಭಾವನೆ ಮಾಡುತ್ತಾರೆ ? ಭಾರತೀಯರು ಎಂತಹ ನೀಚರೆಂದು ಭಾವನೆಮಾಡುತ್ತಾರೆ ? ಸೀಪಾಯಿಗಳನ್ನು ದಮನಮಾಡಿಬಿಟ್ಟವೆಂದು ಆಲೋಚಿಸುವುದಿಲ್ಲವೇ ? ಕ್ರಾಂತಿಯು ನಿರ್ನಾಮವಾಯಿತೆಂದು ಭಾವನೆ ಮಾಡುವುದಿಲ್ಲವೇ ?

ಕಾರಾಗೃಹದಲ್ಲಿರುವ ಸೋದರರು ಗೋಧಿಯನ್ನು ಬೀಸುತ್ತಾ ಹಾಡುವ ಕ್ರಾಂತಿಗೀತಗಳು ವೀರೋದಾತ್ತ ಭಾವನೆಗಳು ಪ್ರಚೋದಿಸದೇ ವಿಫಲವಾಗುವುದೇ ? ಅವರ ಹೆಂಡತಿ ಮಕ್ಕಳು ಮಾಡುತ್ತಿರುವ ಆರ್ತನಾದಕ್ಕೆ ಉತ್ತರವೇನು ? ಮನೆಯಲ್ಲಿ ನಿಮಗೂ ಹೀಗಾಗುವುದಿಲ್ಲವೇ ಎಂದು ಕೇಳುತ್ತಿರುವುದಕ್ಕೆ ಉತ್ತರವೇನು ?

ಇಲ್ಲ ! ತಡೆಯಲಾಗುವುದಿಲ್ಲ. ಇನ್ನೊಂದು ಗಳಿಗೆಯೂ ತಡೆಯಲಾಗುವುದಿಲ್ಲ. ನಿಯಮಿತ ದಿನಕ್ಕಿಂತ ಮೊದಲು ಕ್ರಾಂತಿಯು

ಆರಂಭವಾಗುತ್ತದೆ. ಆಗಲಿ! ಆಗಲಿ! ಮೀರತ್‌ನ ವೀರರು ಮೊದಲು ಕ್ರಾಂತಿಯನ್ನು ಆರಂಭಿಸಿದರೆಂದಾಗುತ್ತದೆ. ಆಗಲಿ!

ಅದೇ ದಿನ ರಾತ್ರಿ ಮೀರತ್‌ನ ವೀರರು ಬ್ಯಾರಕ್‌ನಲ್ಲಿ ಸಭೆ ಸೇರಿದರು. ಮೀರತ್‌ನ ಮಿಲ್ಟ್ರಿ ಕೇಂದ್ರದಲ್ಲಿದ್ದ ದೇಸೀಸಿಪಾಯಿ ಗಳೆಲ್ಲರೂ ಈ ಮಹಾ ಸಭೆಗೆ ಬಂದಿದ್ದರು.

ಕುದುರೆ ಸೈನ್ಯದ ಮಹಮುದ್ ಖಾಸೀಂ ಮಾತನಾಡಿದನು- ಸಹೋದರರೇ! ಈದಿನ ಪ್ರಾತಃಕಾಲ ಕವಾಯಿತ್ ಮೈದಾನದಲ್ಲಿ ನಡದ ಘಟನೆಗಳನ್ನೂ ನೀವೆಲ್ಲರೂ ನೋಡಲಿಲ್ಲವೇ? ಖಡ್ಗಗಳನ್ನು ಹಿಡಿದು ಝಳಪಿಸುವಂತಹ ಕೈಗಳಿಗೆ ಸಂಕೋಲೆಯನ್ನು ತೊಡಿಸಿದುದನ್ನು ನೀವು ಗಳು ನೋಡಲಿಲ್ಲವೆ? ತ್ಯಾಗವೀರರನ್ನು ಕಳ್ಳರಂತೆ ಬಂದೀಖಾನೆಗಳಿಗೆ ಕೂಡಿದುದನ್ನು ನೀವುಗಳು ನೋಡಲಿಲ್ಲವೆ? ಇವುಗಳಿಂದ ನಿಮ್ಮ ಹೃದ ಯಗಳು ಚಲಿಸಲಿಲ್ಲವೇ?

"ಕರ್ನಲ್ ಸ್ಮಿತ್ ಫರಂಗೀ ಸೈನಿಕರನ್ನು ಸರ್ವ ಶಕ್ತಿಗಳಿಂದಲೂ ಸಜ್ಜಿತರನ್ನಾಗಿ ಮಾಡಿ ಶತೃಗಳೆದುರು ನಿಲ್ಲಿಸುವಂತೆ ನಮ್ಮೆದುರಿಗೆ ನಿಲ್ಲಿಸಿದನು. ನಮ್ಮ ಕಣ್ಣೆದುರಿನಲ್ಲಿ ನಮ್ಮ ಸಹೋದರರನ್ನು ಅಪ ಮಾನಗೊಳಿಸಿದನು. "ಕುನ್ನಿಗಳೇ! ನೀವೇನು ಮಾಡಬಲ್ಲಿರಿ"–ಎಂದು ನಮಗೆ ಸವಾಲು ಹಾಕಿದನು. ಅದಕ್ಕೆ ನಿಮ್ಮ ಉತ್ತರವೇನು? ಅವನ ತಶಿರರಾದ ನಾವು ಪುನಃ ತಲೆ ಎತ್ತುವುದೇ ಬೇಡವೇ?

"ಸಹೋದರರೇ! ಅವರ ಸವಾಲಿಗೆ ಉತ್ತರವನ್ನು ಕೊಡಬೇಕು. ಭಾರತೀಯರು ಎಂತಹ ವೀರರೆಂಬುದನ್ನು ಅವರಿಗೆ ಸಾಬೀತುಮಾಡಿ ತೋರಿಸಬೇಕು. ಕಾರಾಗೃಹದಲ್ಲಿರುವ ನಮ್ಮ ಸಹೋದರರು ನಮ್ಮನ್ನು ಹೇಡಿಗಳೆಂದು ಕೊಳ್ಳದಂತೆ ನಡೆದುಕೊಳ್ಳ ಬೇಕು.

"ನಾಳೆಯದಿನ ನಾವು ಮೀರತ್ ನಗರದಲ್ಲಿ ಕ್ರಾಂತಿಯನ್ನು ಆರಂಭಿಸಬೇಕು. ಫರಂಗಿಗಳ ರಕ್ತದಲ್ಲಿಯೇ ನಾಳೆಯದಿನ ಸೂರ್ಯನು ಅಸ್ತಮಿಸಬೇಕು. ಸಹೋದರರೇ! ಏನು ಹೇಳುತ್ತೀರಿ? ನಿಮ್ಮ ಹೃದಯ ಗಳಲ್ಲಿ ಎದ್ದಿರುವ ದಳ್ಳುರಿಯು ಫರಂಗಿಗಳ ರಕ್ತವನ್ನು ಅಪೇಕ್ಷಿ ಸುತ್ತಿಲ್ಲವೇ?"

ಮಾರನೆಯ ದಿನವೇ ಕ್ರಾಂತಿಯನ್ನು ಆರಂಭಿಸಬಾರದೆಂದು ಯಾರೂ ಹೇಳಲಿಲ್ಲ. ಆ ಮನಸ್ಸು ಅಲ್ಲಿ ಯಾರಿಗೂ ಇರಲಿಲ್ಲ. ಎಲ್ಲರೂ "ಆಗಲಿ ! ನಾಳೆಯೇ ಆರಂಭಿಸೋಣ." ಎಂದು ಕೂಗಿದರು.

## ಚಲೋ-ದಿಲ್ಲಿ

ಮಾರನೆಯ ದಿನವೇ ಭಾನುವಾರ. ಕರ್ನಲ್ ಸ್ಮಿತ್‌ನ ಮನೆಯ ಮುಂದೆ ಕುದುರೆಯ ಸಾರೋಟು ನಿಂತಿದ್ದಿತು. ಅವನು ತನ್ನ ಹೆಂಡತಿ ಮಕ್ಕಳೊಡನೆ ಚರ್ಚ್‌ಗೆ ಹೋಗುವುದಕ್ಕೆ ಸಿದ್ಧನಾಗಿದ್ದನು. ಇನ್ನೇನು ಗಾಡಿಯನ್ನು ಹತ್ತಬೇಕು ! ತನ್ನ ಹೆಂಡತಿಯೇ ಬಂದಿರಲಿಲ್ಲ. ಅವಳಿಗಾಗಿ ಕಾದಿದ್ದ ಹಾಗೆಯೇ ಆಯಾಳೊಂದಿಗೆ ಮಾತನಾಡುತ್ತಾ ನಿಂತಿದ್ದ ಅವನ ಹೆಂಡತಿಯು ಬಂದು ಸನ್ನೆಯನ್ನು ಮಾಡಿ ಗಂಡನನ್ನು ಕರದಳು. ಸ್ಮಿತ್ ಆವಳ ಬಳಿಗೆ ಹೋದನು.

ಅವಳು ಹೇಳಿದಳು–"ಆಯಾ ಈದಿನ ಚರ್ಚ್‌ಗೆಹೋಗ ಬೇಡವೆಂದು ಹೇಳುತ್ತಾಳೆ. ಹೊರಗೇನೋ ಗಲಾಟೆಯಾಗುವುದಂತೆ"

"ಹಾಗೆಂದರೇನು ?"

"ಈದಿನ ಸಿಪಾಯಿಗಳು ಗಲಾಟೆ ಮಾಡುತ್ತಾರಂತೆ. ಅದಕ್ಕಾಗಿ ಮಕ್ಕಳನ್ನೂ ನನ್ನನ್ನೂ ಮನೆಯಲ್ಲಿಯೇ ಇರಬೇಕೆಂದು ಹೇಳುತ್ತಾಳೆ."

"ಗಲಾಟೆಯಾಗುವುದೆಂದು ಅವಳಿಗೆ ಹೇಗೆ ಗೊತ್ತು!?"

"ಅದೊಂದೂ ಗೊತ್ತಿಲ್ಲ ! ನೀವು ಹೋಗಬೇಡಿರೆನ್ನುತ್ತಾಳೆ ! ಅಷ್ಟೆ."

"ಅವಳಿಗೆ ಬುದ್ಧಿ ಇಲ್ಲ ! ನೀನು ಬಾ" ಎಂದು ಹೆಂಡತಿಯ ತೋಳಿನಲ್ಲಿ ತೋಳು ಹಾಕಿ ಎಳದುಕೊಂಡು ಹೋಗಿ ಗಾಡಿಯಲ್ಲಿ ಕುಳಿತುಕೊಂಡನು. ಗಾಡಿಯು ಚರ್ಚಿನ ಕಡೆಗೆ ಹೋಯಿತು."

ಹತ್ತು ನಿಮಿಷಗಳ ಕಾಲ ಗಾಡಿಯು ಮಾಮೂಲಿನಂತೆ ಮುಂದೆ ಹೋಯಿತು. ಅಷ್ಟರಲ್ಲಿ ಸೈಯದ್ ಮಿರ್ ಖಾನನು ಕುದುರೆಯ ಮೇಲೆ ಬಂದು ಗಾಡಿಯನ್ನು ನಿಲ್ಲಿಸಿ ಸ್ಮಿತ್‌ನೊಡನೆ ಹೇಳಿದನು.

"ಕರ್ನಲ್ ಸಾಬ್! ಸೀಪಾಯಿಗಳು ದಂಗೆ ಎದ್ದಿದ್ದಾರೆ. ನಿನ್ನೆ ಜೈಲಿಗೆ ಹಾಕಿರುವವರನ್ನು ಬಿಡಿಸಿಕೊಂಡು ಬರಲು ಹೋಗಿದ್ದಾರೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ಅವರೆಲ್ಲಾ ಫರಂಗೀ ಅಧಿಕಾರಿಗಳಾದ ನಿಮ್ಮನ್ನು ಮುತ್ತಬಹುದು."

"ವಿಲ್ಸರ್ಸ್-ಹೇವಿಟ್ ಎಲ್ಲಿದ್ದಾರೆ? ಕರ್ನಲ್ ಫಿನ್ನಿಸ್ ಎಲ್ಲಿದ್ದಾನೆ?"

"ಯಾರು ಯಾರು ಎಲ್ಲೆಲ್ಲಿ ಇದ್ದಾರೆಯೋ ಗೊತ್ತಿಲ್ಲ. ಸುಮಾರು ಅವರುಗಳು ಚರ್ಚ್‌ನಲ್ಲಿರ ಬಹುದು. ನೀವು ಮುಂದೆ ಹೋಗುವುದು ಅಪಾಯಕರ"

"ಮೀರ್ ಖಾ! ಹಾಗಾದರೆ ನೀನು ನಮ್ಮ ಮನೆಯವರನ್ನು ಕರದುಕೊಂಡು ಹೋಗಿ ಎಲ್ಲಿಯಾದರೂ ಅಪಾಯವಿಲ್ಲದ ಕಡೆ ಸೇರಿಸು. ನಾನು ಚರ್ಚಿಗೆ ಹೋಗುತ್ತೇನೆ"

ಮೀರ್ ಖಾನನ ಕುದುರೆಯನ್ನು ತೆಗೆದುಕೊಂಡು ಸ್ಮಿತ್ ಚರ್ಚಿನ ಕಡೆ ಹೊರಟುಹೋದನು. ಮೀರ್‌ಖಾನ್ ಗಾಡಿಯಲ್ಲಿ ಕುಳಿತು ಕೊಂಡು ಗಾಡಿಯನ್ನು ಹಿಂತಿರುಗಿಸುವಂತೆ ಹೇಳಿದನು.

ಸ್ಮಿತ್ ಕುದುರೆಯನ್ನು ಹತ್ತಿಕೊಂಡು ಚರ್ಚಿನ ಬಳಿಗೆ ಬಂದನು. ಚರ್ಚ್‌ನಲ್ಲಿ ಫರಂಗೀ ಅಧಿಕಾರಿಗಳೆಲ್ಲರೂ ಇದ್ದರು. ಈಗೇನು ಮಾಡ ಬೇಕೆಂಬ ಆಲೋಚನೆಯು ಬಂದಿತು.

ಕರ್ನಲ್ ಫಿನ್ನಿಸ್ ಎಂಬ ತರುಣ ಸರದಾರನು-"ಸೀಪಾಯಿಗಳಿಗೆ ಸ್ವಲ್ಪ ಅಸಮಾಧಾನವಾಗಿರಬೇಕು. ಇದೊಂದು ದೊಡ್ಡ ವಿಷಯವಲ್ಲ. ನಾನು ಅವರನ್ನು ಸಮಾಧಾನ ಮಾಡುತ್ತೇನೆ. ಅವರನ್ನು ಹತೋಟಿಗೆ ತರುತ್ತೇನೆ"-ಎಂದು ಹೇಳಿದನು.

ಅಲ್ಲಿದ್ದವರೆಲ್ಲರೂ ದಿಕ್ಕೆಟ್ಟವರಂತೆ ಆಗಿದ್ದರು. ಅವನು ಹೇಳಿ ದುದನ್ನು ಸಹಕರಿಸುವುದಕ್ಕಾಗಲೀ ವಿರೋಧಿಸುವುದಕ್ಕಾಗಲೀ ಅವರಲ್ಲಿ ಯಾರಿಗೂ ಸಮಾಧಾನವಿರಲಿಲ್ಲ. ಫಿನ್ನಿಸ್ ಅಧಿಕಾರಿಗಳ ಆಜ್ಞೆಗಾಗಿ ಕಾಯಲಿಲ್ಲ. ಕುದುರೆಯ ಮೇಲೆ ಕುಳಿತುಕೊಂಡು ಕೆಲವು ಮಂದಿ ಸೈನಿಕರೊಡನೆ ಅವನು ಕಾರಾಗೃಹದ ಬಳಿಗೆ ಹೋದನು.

ಅಷ್ಟು ಹೊತ್ತಿಗೆ ವಿಪ್ಲವಕಾರರೆಲ್ಲರೂ ಕಾರಾಗೃಹದ ಸಮೀಪದಲ್ಲಿದ್ದರು. ಕಾರಾಗೃಹದಲ್ಲಿ ಪಹರೆ ಕೊಡುತ್ತಿದ್ದ ದೇಸೀ ಜನಗಳು ಪ್ರತಿರೋಧವಿಲ್ಲದೇ ಜೈಲು ಬಾಗಿಲುಗಳನ್ನು ತೆಗೆದು ಬಿಟ್ಟಿದ್ದರು. ಒಳಗಿದ್ದ ಬಂದಿಗಳೆಲ್ಲರನ್ನೂ ಬಿಡುಗಡೆ ಮಾಡಿದ್ದರು. ಹಿಂದಿನ ದಿನ ಕಾರಾಗೃಹದಲ್ಲಿರಿಸಲಾಗಿದ್ದ ಎಂಬತ್ತೈದು ಮಂದಿ ವೀರರುಗಳ ಕೈಬೇಡಿಗಳನ್ನು ಆಗಿನ್ನೂ ತೆಗೆದಿರಲಿಲ್ಲ. ಊರಿನಿಂದ ಕೆಲವು ಮಂದಿ ಕಮ್ಮಾರರನ್ನು ಕರಸಿ ಕೈಬೇಡಿಗಳನ್ನು ಕತ್ತರಿಸಿ ಹಾಕಲಾಗಿತ್ತು. ಹೀಗೆ ಸ್ವತಂತ್ರರಾದ ವೀರರೂ ವಿಪ್ಲವಕಾರರೂ ಜೈಲಿನ ಮುಂದಿದ್ದ ದೊಡ್ಡ ಮೈದಾನದಲ್ಲಿ ಸಭೆ ಸೇರಿ ಮಾತನಾಡುತ್ತಿದ್ದರು.

ಕರ್ನಲ್ ಫಿನ್ನಿಸ್ ಒಂದು ಬಗೆಯ ಹುಚ್ಚು ಧೈರ್ಯದಿಂದ—ಅಧಿಕಾರದ ದರ್ಪದಿಂದ ಅಲ್ಲಿಗೆ ಬಂದನು. ಕುದುರೆಯ ಮೇಲೆ ಕುಳಿತುಕೊಂಡೇ ವಿಪ್ಲವಕಾರರನ್ನು ಉದ್ದೇಶಮಾಡಿ ಹೇಳಿದನು.

"ಸೀಪಾಯಿಗಳೇ! ನೀವು ಅನರ್ಥಕಾರಿಯಾದ ಕೆಲಸವನ್ನು ಮಾಡಿದ್ದೀರಿ. ಈಗಲೂ ಬಂದಿಗಳನ್ನು ಕಾರಾಗೃಹದಲ್ಲಿ ಕೂಡಿರಿ. ತಪ್ಪಾಯಿತೆಂದು ಶರಣಾಗತರಾಗಿರಿ. ಹಾಗೆ ಮಾಡದಿದ್ದರೆ ನಿಮ್ಮೆಷ್ಟು ಜನಗಳನ್ನೂ ಅಪರಾಧಿಗಳೆಂದು ಭಾವಿಸಿ ಕಠಿಣ ಶಿಕ್ಷೆ ವಿಧಿಸಲಾಗುತ್ತದೆ. ಜೈಲುಗಳಲ್ಲಿ ಕೂಡಲಾಗುತ್ತದೆ. ಪ್ರಬಲರಾದ ಫರಂಗಿ ಸೈನಿಕರನ್ನು ನೀವು ಎದುರಿಸಲಾರಿರಿ. ಭಯಂಕರವಾದ ಆ ಫಿರಂಗಿಗಳ ಎದುರಿನಲ್ಲಿ ನೀವು ದೂಳೀ ಪಟವಾಗಿ ಹೋಗುತ್ತೀರಿ"

ಈ ಮಾತುಗಳು ಹೇಳಲ್ಪಟ್ಟ ಕೂಡಲೇ ಶಾಂತವಾಗಿದ್ದ ಆ ಸಭೆಯು ಕೋಲಾಹಲದಿಂದ ತುಂಬಿತು. ಅಲ್ಲಿದ್ದ ಸೀಪಾಯಿಗಳೆಲ್ಲರೂ ಬಂದೂಕುಗಳನ್ನೂ ಎತ್ತಿದರು. ಫಿನ್ನಿಸ್ ಸಾಹೇಬನು ಕುದುರೆಯನ್ನು ಹಿಂದೆ ತಿರುಗಿಸಿದನು. ತನ್ನ ಸಹೋದ್ಯೋಗಿಗಳ ಕಡೆ ನೋಡಿದನು. ಅವರಾಗಲೇ ಎರಡು ಫರ್ಲಾಂಗುಗಳ ದೂರದಲ್ಲಿ ವೇಗವಾಗಿ ದೌಡಾಯಿಸುತ್ತಿದ್ದರು. ತಾನೂ ಕುದುರೆಯನ್ನು ಚಮಕಾಯಿಸಿದನು. ಕುದುರೆಯು ಹೆಜ್ಜೆಯನ್ನು ಮುಂದಿಡುವುದರೊಳಗಾಗಿ ನೂರಾರು ಗುಂಡುಗಳು ಹಾರಿದವು. ಫಿನ್ನಿಸ್ ಕುದುರೆಯ ಸಹಿತವಾಗಿ ಕೆಳಗೆ

ಬಿದ್ದನು. ವಿಪ್ಲವಕಾರರು ಕರ್ನಲ್ ಸಾಹೇಬನ ಮತ್ತು ಅವನ ಕುದು ರೆಯ ದೇಹಗಳನ್ನು ತುಳಿದುಕೊಂಡೇ ಚರ್ಚ್‌ನ ಕಡೆಗೆ ಹೊರಟರು.

ವಿಪ್ಲವಕಾರರು ತಮ್ಮ ಕಡೆಗೆ ಬರುತ್ತಿದ್ದಾರೆಂಬ ವರ್ತಮಾನವು ಚರ್ಚ್‌ನಲ್ಲಿದ್ದ ಫರಂಗೀ ಜನಗಳಿಗೆ ತಿಳಿಯಲು ಬಹಳ ಹೊತ್ತು ಹಿಡಿಯ ಲಿಲ್ಲ. ಅವರೆಲ್ಲರೂ ಅನತಿಕಾಲದಲ್ಲಿಯೇ ಚರ್ಚ್‌ನಿಂದ ಓಡಿಹೋಗ ಲಾರಂಭಮಾಡಿದರು.

ಫರಂಗಿಯವರಿಗೆ ಮೀರತ್ ನಗರವು ಘೋರಾರಣ್ಯದಂತಾಗಿದ್ದಿತು. ಸೀಪಾಯಿಗಳು ಮುನಿದೆದ್ದು ಪ್ರಳಯರುದ್ರರಂತೆ ಧಾವಿಸುತ್ತಿದ್ದರು. ಪೋಲೀಸಿನವರೂ ಅವರೊಡನೆ ಸೇರಿಹೋದರು. ಕಾರಾಗೃಹವು ಒಡೆ ಯಲ್ಪಟ್ಟಾಗ ಬಿಡುಗಡೆ ಹೊಂದಿದ ಖೈದಿಗಳೂ ಇವರೊಂದಿಗೆ ಕೂಡಿ ಕೊಂಡರು. ಮೀರತ್‌ನ ನಾಗರಿಕರೂ ಅಕ್ಕಪಕ್ಕದ ಗ್ರಾಮಗಳವರೂ ಶಸ್ತ್ರಧಾರಿಗಳಾಗಿ ತಿರುಗುತ್ತಿದ್ದರು. ಮೀರತ್ ನಗರವೇ ಫರಂಗಿ ಯವರಿಗೆ ವಿರೋಧವಾಗಿ ಎದ್ದು ನಿಂತಿದ್ದಿತು.

ಎದುರಿಗೆ ಸಿಕ್ಕಿದ ಫರಂಗೀ ನಾಗರಿಕರನ್ನೂ ಸೈನಿಕರನ್ನೂ ಕತ್ತರಿಸಿ ಹಾಕುತ್ತಿದ್ದರು. ಕುದುರೆಗಳ ಮೇಲೆ ಅಟ್ಟಹಾಸದಿಂದ ಹೋಗುತ್ತಿದ್ದ ವರು ಭರ್ಜಿಗಳಿಂದ ತಿವಿಯಲ್ಪಟ್ಟು ಹಾಗೆಯೇ ಕುದುರೆಗಳ ಬೆನ್ನುಗಳಿಂದ ಕೆಳಗುರುಳಿದರು. ವೈಭವದಿಂದ ಒರಗಿಕೊಂಡು ಗಾಡಿಗಳಲ್ಲಿ ಹೋಗು ತ್ತಿದ್ದವರು ಗುಂಡುಗಳಿಂದ ಹೊಡೆಯಲ್ಪಟ್ಟು ಹಾಗೆಯೇ ಶಾಶ್ವತವಾಗಿ ಒರಗಿದರು. ಓಡಿಹೋಗಲು ಪ್ರಯತ್ನಮಾಡಿದ ಸೈನಿಕರು ಬೀದಿಯ ಪಕ್ಕದಲ್ಲಿ ಸತ್ತುಬಿದ್ದರು. ವಿಲಾಸದಿಂದ ವಾಯುವಿಹಾರ ಹೋಗುತ್ತಿದ್ದ ಹೆಂಗಸರು ಖಡ್ಗಗಳಿಗೆ ಆಹುತಿಯಾದರು. ಮಕ್ಕಳ ಗಾಡಿಗಳನ್ನು ತಳ್ಳಿ ಕೊಂಡು ಹೋಗುತ್ತಿದ್ದ ಆಯಾಗಳು ದಿಕ್ಕೆಟ್ಟು ಓಡುತ್ತಾ ದೇಸೀ ಜನಗ ಳಾದುದರಿಂದ ಜೀವಗಳನ್ನು ಉಳಿಸಿ ಕೊಂಡರು. ಭಾರತೀಯರನ್ನು ದಮನಮಾಡಲು ಬೆಳೆಯುತ್ತಿದ್ದ ಮಕ್ಕಳು ತುಂಡು ತುಂಡು ಮಾಡ ಲ್ಪಟ್ಟು ಬೀದಿಗಳಲ್ಲಿ ಚೆಲ್ಲಾಡಿದವು.

ವಿಪ್ಲವವು ಆರಂಭವಾದ ಮೇಲೆ ಫರಂಗೀ ಜನಗಳೆಲ್ಲರೂ ಭಯಾ ವಿಷ್ಟರಾಗಿದ್ದರು. ಪ್ರತಿನಿಮಿಷವೂ ಅವರು ಮರಣವನ್ನು ಎದುರು ನೋಡುತ್ತಿದ್ದರು. ಫರಂಗೀ ಸೈನ್ಯವು ಬಂದು ತಮಗೆ ರಕ್ಷಣೆಯು

ಸಿಕ್ಕೀತೇನೋ ಎಂದು ಸದಾ ನಿರೀಕ್ಷಿಸುತ್ತಿದ್ದರು. ಆದರೆ ಅವರಿಗಾವ ರಕ್ಷಣೆಯೂ ಬರದೆ ನಿರಾಶರಾಗುತ್ತಿದ್ದರು.

ಯಾವನಿಗಾಗಲೀ ಧೈರ್ಯವಿಲ್ಲ. ಮರುಕ್ಷಣದಲ್ಲೇನಾಗುವುದೋ ? ಅಧಿಕಾರಿಗಳು, ಗುಮಾಸ್ತರು, ವ್ಯಾಪಾರಿಗಳು, ನೌಕರರು ಎಲ್ಲರ ಸ್ಥಿತಿಯೂ ಒಂದೇ ಆಗಿದ್ದಿತು. ತಮ್ಮ ಕಚೇರಿಗಳಿಗೆ ಹೋದರೆ ಅಲ್ಲಿ ಕೆಲಸಕ್ಕಿರುವ ದೇಸೀಜನಗಳು ಸಲಾಂ ಮಾಡುತ್ತಾರೆ. ಮನೆಗಳಿಗೆ ಹೋದರೆ ಆಯಾಗಳೂ, ಬಟ್ಲರುಗಳೂ, ಜವಾನರುಗಳೂ ಸಲಾಂ ಮಾಡುತ್ತಾರೆ. ಕೆಲಜನ ವಿಪ್ಲವಕಾರರು ಬಂದರೆ ಅವರೆಲ್ಲಾ ತಿರುಗಿ ಬೀಳುತ್ತಾರೆ! ಯಾರನ್ನು ನಂಬುವುದು ? ಏನುಮಾಡುವುದು ?

ಸಾಯಂಕಾಲ ಸುಮಾರು ಆರು ಆರೂವರೆ ಗಂಟೆಯಿರಬಹುದು. ಬ್ರಿಗೇಡಿಯರ್ ವಿಲ್‌ಸ್ನ್ ಕವಾಯಿತ್ ಮೈದಾನದ ಆಚೆಯಲ್ಲಿದ್ದ ತನ್ನ ಮನೆಯಲ್ಲಿದ್ದನು. ವರಾಂಡದಲ್ಲಿ ಕುಳಿತು ಸಿಗಾರ್ ಸೇದುತ್ತಿದ್ದನು. ಅವನ ಹೆಂಡತಿಯು ಕುಳಿತು ಅವನೊಂದಿಗೆ ಮಾತನಾಡುತ್ತಿದ್ದಳು.

ಹೀಗೆ ಹತ್ತು ನಿಮಿಷಗಳು ಕಳೆದಿರಬಹುದು. ಅಶ್ವಾರೋಹಿಯೊಬ್ಬನು ವೇಗದಿಂದ ಅವನ ಮನೆಯ ಕಡೆಗೆ ಬರುತ್ತಿದ್ದನು. ವಿಲ್ಸನ್ ಕೌತುಕದಿಂದ ಅತ್ತಕಡೆಗೆ ನೋಡುತ್ತಿರುವಂತೆಯೇ ಅವನು ಬಂದು ಕುದುರೆಯಿಂದಿಳಿದು ಏದುತ್ತಾ ಹತ್ತಿರಕ್ಕೆ ಬಂದನು. ಬಂದವನು ಮೇಜರ್ ವೆಲ್ಷ್ !

ವಿಲ್ಸನ್ ನಿದಾನವಾಗಿ ಮಾತನಾಡುತ್ತಾ "ಯಾಕೆ ಗಾಬರಿಯಾಗಿದ್ದೀಯೆ ? ಏನು ಸಮಾಚಾರ ? ಕುಳಿತುಕೋ!" ಎಂದನು.

ವೆಲ್ಷ್ ಕುಳಿತುಕೊಳ್ಳಲಿಲ್ಲ. ಗಾಬರಿಯಿಂದ ತೊದಲುತ್ತಾ ಹೇಳಿದನು. "ಸೀಪಾಯಿಗಳು ತಿರುಗಿ ಬಿದ್ದಿದ್ದಾರೆ. ಕ್ರಾಂತಿಯು ಆರಂಭವಾಗಿದೆ"

"ಅದಕ್ಕೇಕೆ ಇಷ್ಟು ಗಾಬರಿಪಡುತ್ತೀಯೇ ? ಯಾಕೆ ಇಷ್ಟು ಹೆದರಿದ್ದೀಯೆ ? ಇದಕ್ಕೆಲ್ಲಾ ಬಂದೋಬಸ್ತು ಮಾಡೋಣ! ಮೊದಲು ಹೋಗಿ ಅವರಿಗೆ ಹೇಳು. ಶಿಸ್ತಿಗೆ ವಿರೋಧವಾಗಿ ನಡೆಯುವವರು ಎಂಬತ್ತೈದು ಮಂದಿಗಾದಂತೆ ಶಿಕ್ಷೆಗೊಳಗಾಗುವರೆಂದು ಹೇಳು!"

" ಹಾಗಲ್ಲ, ಬ್ರಿಗೇಡಿಯರ್ ! ಸೀಪಾಯಿಗಳು. ಕಾರಾಗೃಹವನ್ನು ಒಡೆದಿದ್ದಾರೆ. ನಮ್ಮ ಜನಗಳನ್ನೂ ಸೈನಿಕರನ್ನೂ ಕತ್ತರಿಸಿ ಹಾಕುತ್ತಿದ್ದಾರೆ. ನಾಳೆಯದಿನ ಪ್ರಾತಃಕಾಲದೊಳಗಾಗಿ ಮೀರತ್ ನಗರದಲ್ಲಿ ಒಂದು ಪಿಳ್ಳೆಯೂ ಉಳಿಯುವುದು ಕಷ್ಟವಾಗಿದೆ."

ಬ್ರಿಗೇಡಿಯರ್ ಮೇಲೆದ್ದನು. ಸೇದುತ್ತಿದ್ದ ಸಿಗಾರ್ ಕೆಳಗೆ ಹಾಕಿದನು. ಜೇಬುಗಳಲ್ಲಿ ಕೈಹಾಕಿ ನಿಂತುಕೊಂಡನು. ಧೃಢವಾಗಿ ನಿಂತುಕೊಂಡನು. ತನ್ನೆದುರಿಗಿದ್ದ ಸೇನಾಧಿಕಾರಿಯನ್ನು ತಿಂದುಹಾಕುವಂತೆ ನೋಡಿದನು.

" ವೆಲ್ಷ್ ! ನಮ್ಮ ಸೈನಿಕರೇನು ಮಾಡುತ್ತಿದ್ದಾರೆ? ನೀವೆಲ್ಲಾ ಏನುಮಾಡುತ್ತಿದ್ದಿರಿ ? ಇಷ್ಟು ಹೊತ್ತಾದರೂ ನನಗೇಕೆ ಸಮಾಚಾರವು ಬರಲಿಲ್ಲ ? "

" ವಿಪ್ಲವವು ಆರಂಭವಾಯಿತೆಂದು ನಮಗೆ ತಿಳಿದಾಗ ನಾವು ಚರ್ಚ್‌ನಲ್ಲಿದ್ದೆವು. ಸಮುದ್ರದ ಅಲೆಗಳಂತೆ ಬರುತ್ತಿದ್ದ ಆ ಸೇನೆಯನ್ನು ಎದುರಿಸುವುದು ಸಾಧ್ಯವಿಲ್ಲವೆಂದೂ ಅಲ್ಲಿಂದ ಏನಾದರೂ ಮಾಡಿ ತಪ್ಪಿಸಿಕೊಂಡು ಬರಬೇಕೆಂದೂ ಪ್ರಯತ್ನಮಾಡಿದೆವು. ನಾವು ಬಿಟ್ಟು ಹೊರಡುವುದರೊಳಗಾಗಿ ವಿಪ್ಲವಕಾರರು ಚರ್ಚ್ ಮುತ್ತಿದರು. ಚರ್ಚ್‌ನಲ್ಲಿದ್ದ ನಮ್ಮ ಜನಗಳಲ್ಲಿ ಬಹಳ ಮಂದಿ ಸತ್ತುಹೋದರು. ಕಳಿದುಳಿದ ನಾವು ತಪ್ಪಿಸಿಕೊಂಡು ಬರುವುದೇ ಮಹಾಪ್ರಯಾಸವಾಯಿತು. ! "

ವಿಲ್ಸನ್ ತಲೆಯನ್ನು ಕೊಡವಿ " ನಾನು ಪೆರೇಡ್ ಮೈದಾನಕ್ಕೆ ಬರುತ್ತೇನೆ ! ಸೈನಿಕರು ಸಿದ್ಧವಾಗಿರಲಿ, " ಎಂದು ಹೇಳಿದನು.

ಕೂಡಲೇ ವೆಲ್ಷ್ ಹೊರಟು ಹೋದನು.

ಅನಂತರ ಕುದುರೆಯನ್ನು ತರಿಸಿಕೊಂಡು ಬ್ರಿಗೇಡಿಯರ್ ವಿಲ್ಸನ್ ತಾನು ಸಹ ಪೆರೇಡ್ ಮೈದಾನಕ್ಕೆ ಹೋದನು. ಶಿಬಿರದಲ್ಲಿ ಫರಂಗೀ ಸೈನಿಕರ ಸ್ಥಿತಿಯು ಅಲ್ಲಕಲ್ಲೋಲನಾಗಿದ್ದಿತು. ಸೈನಿಕರು ಗಾಬರಿಯಿಂದ ಒಬ್ಬೊಬ್ಬರು ಒಂದೊಂದು ಕಡೆ ಇದ್ದರು. ಕರ್ನಲ್ ಸ್ಮಿತ್, ಕ್ಯಾಪ್ಟನ್ ಕ್ರೈಜೀ, ವೆಲ್ಷ್ ಮುಂತಾದ ಸೇನಾನಾಯಕರು ಸೈನಿಕರನ್ನು ಕೂಡಿಸಲು ಪ್ರಯತ್ನಮಾಡುತ್ತಿದ್ದರು. ಫರಂಗೀ ಕುದುರೆಗಳಿರಲಿಲ್ಲ.

ಫಿರಂಗಿ ಪಡೆಯವರು ಪೂರ್ಣವಾಗಿ ತರಬೇತು ಹೊಂದಿರಲಿಲ್ಲ. ಬಂದೂಕು ಹಾರಿಸುವ ದಳದವರೆಲ್ಲಾ ಹೊಸದಾಗಿ ಸೈನ್ಯಕ್ಕೆ ಸೇರಿ ಕಲಿಯುತ್ತಿದ್ದರು.

ವಿಲ್ಸನ್ ಇದನ್ನೆಲ್ಲಾ ಪರಿಶೀಲಿಸಿ ಏನುಮಾಡುವುದೆಂದು ಚಿಂತಿಸುತ್ತಿದ್ದನು. ಸೇನಾಧಿಪತಿಗಳು ಪ್ರಯಾಸದಿಂದ ಸೈನಿಕರೆಲ್ಲರನ್ನೂ ಜಮಾಯಿಸಿದರು. ವಿಲ್ಸನ್ ಅವರೆಲ್ಲರಿಗೂ ಕರ್ತವ್ಯ ಕರ್ಮವನ್ನು ಉಪದೇಶಿಸಿದನು. ಸೇನಾಧಿಕಾರಿಗಳಿಗೆಲ್ಲಾ ಅವರ ಜವಾಬ್ದಾರಿಯನ್ನು ತಿಳಿಸಿ ಎಚ್ಚರಿಸಿದನು. ವಿಪ್ಲವಕಾರರ ಮೇಲೆ ಆಕ್ರಮಣ ಮಾಡಿ ಅವರನ್ನು ಅಡಗಿಸಬೇಕೆಂದು ಆಜ್ಞೆ ಮಾಡಿದನು.

ವಿಲ್ಸನ್‌ನ ಉಪದೇಶವಾಕ್ಯಗಳನ್ನು ಕೇಳಿದನಂತರ ಸೀಪಾಯಿಗಳು ತಮ್ಮ ಬ್ಯಾರಕ್‌ಗಳಿಗೆ ಹೋದರು. ಅನಂತರ ವಿಪ್ಲವಕಾರರನ್ನು ಎದುರಿಸಲು ಹೊರಡಲು ಸಿದ್ಧರಾದರು. ಅವರಿಗೆಲ್ಲಾ ಆಯುಧಗಳನ್ನು ತರಿಸಿ ಕೊಡಲಾಯಿತು. ಮದ್ದುಗುಂಡುಗಳನ್ನು ಕೂಡಲೇ ತರಿಸಿಕೊಡಲಾಗಲಿಲ್ಲ. ಅದು ಸೈನಿಕರ ಕೈಸೇರುವ ಹೊತ್ತಿಗೆ ಸಾವಕಾಶವಾಯಿತು. ಅಂತೂ ಕಟ್ಟಕಡೆಗೆ ಫರಂಗೀ ಸೈನಿಕರು ಮುಂದೆ ಹೊರಡಲು ತುತ್ತೂರಿಯನ್ನು ಊದಲಾಯಿತು. ಅಷ್ಟು ಹೊತ್ತಿಗೆ ಪೂರ್ಣವಾಗಿ ಕತ್ತಲಾಗಿತ್ತು.

ವಾಚಕ ಮಹಾಶಯರೇ! ನಾವು ಬೇರೊಂದು ಕಡೆಗೆ ಹೋಗೋಣ. ಬನ್ನಿರಿ! ಅತ್ತ ಕಡೆಗೆ ನೋಡಿರಿ! ಅಂತಹ ದೃಶ್ಯವನ್ನು ನೀವೆಲ್ಲಿಯಾದರೂ ನೋಡಿದ್ದೀರಾ? ಇಲ್ಲ.! ನೀವು ನೋಡಿರಲಾರಿರಿ. ಇಲ್ಲಿ ನೋಡಿರಿ! ಧೈರ್ಯದಿಂದ ನೋಡಿರಿ. ಈ ಕಾಳರಾತ್ರಿಯಲ್ಲಿ ಏಳುತ್ತಿರುವ ಆ ಜ್ವಾಲಾ ಮಾಲೆಗಳನ್ನು ನೋಡಿರಿ! ಅವುಗಳಿಂದ ಹೊರಡುತ್ತಿರುವ ವಿವಿಧವರ್ಣಗಳನ್ನು ನೋಡಿರಿ! ಆಕಾಶವನ್ನು ಮುಚ್ಚಿಬಿಡುವುದೋ ಎಂಬಂತೆ ಮೇಲೇಳುತ್ತಿರುವ ಆ ಧೂಮ ರಾಶಿಯನ್ನು ನೋಡಿರಿ! ಅದೇನು ಬಲ್ಲಿರಾ? ವಿಪ್ಲವಕಾರರು ಮೀರತ್‌ನ ಕಂಟೋನ್‌ಮೆಂಟಿಗೆ ಬೆಂಕಿಯನ್ನು ಹಚ್ಚಿದ್ದಾರೆ. ಅಲ್ಲೇನಾಗುತ್ತಿದೆಯೋ ನೋಡೋಣ ಬನ್ನಿರಿ! ಅಲ್ಲಿ ನೋಡಿರಿ! ಉರಿಯುತ್ತಿರುವ ಮನೆಗಳೆಲ್ಲವೂ ಫರಂಗಿಯವರದು. ಪ್ರಳಯರುದ್ರನು ಮೆಲಕು ಹಾಕುತ್ತಿರುವಾಗ ಹಲ್ಲುಗಳು ಕಟಕಟನೆ ಶಬ್ದವಾದಂತೆ ಕೇಳಿ ಬರುತ್ತಿರುವ ಮತ್ತು ಬಿರಿಯುತ್ತಿರುವ ತೊಲೆಗಳ ಶಬ್ದ. ಕಿರಚಿಕೊಳ್ಳುತ್ತಿರುವ ಆ ಸ್ತ್ರೀಯರು ಯಾರೆಂದು ಕೇಳುತ್ತೀರಾ? ಬೆಂಕಿ ಹತ್ತಿದ

ಮನೆಗಳಿಂದ ಹೊರಗೋಡಿ ಬರುತ್ತಿರುವ ಅವರನ್ನು ವಿಪ್ಲವಕಾರರು ಸಿಕ್ಕಿದ ಲ್ಲಿಯೇ ಕತ್ತರಿಸಿ ಹಾಕುತ್ತಿದ್ದಾರೆ. ಉರಿದು ಇನ್ನೇನು ಬೀಳುತ್ತಿರುವ ಈ ಮನೆಯಲ್ಲಿ ಏನಾಗುತ್ತಿದೆ? ನೋಡಿರಿ! ಅದಾವನೋ ಫರಂಗೀ ಶ್ರೀಮಂತನು ತನ್ನ ಬಟ್ಲರನ ಕಾಲಿಗೆ ಬೀಳುತ್ತಿದ್ದಾನೆ. ಬಟ್ಲರನು ಹೊರಗೆ ಬಂದು ವಿಪ್ಲವಕಾರರೊಡನೆಮಾತನಾಡುತ್ತಿದ್ದಾನೆ. ಫರಂಗಿ ಯವನು ಹಿಂದುಗಡೆಯಿಂದ ತನ್ನ ಹೆಂಡತಿ ಮಕ್ಕಳೊಡನೆ ಓಡಿ ಹೋಗುತ್ತಿದ್ದಾನೆ.! ಎಲ್ಲಿಹೋಗುತ್ತೀಯೆ? ವಿಪ್ಲವಕಾರರ ಸಹಸ್ರ ಸಹಸ್ರ ಚಕ್ಷುಗಳಿಂದ ತಪ್ಪಿಸಿಕೊಂಡು ಬದುಕಬಲ್ಲೆಯಾ? ಯಾರಿವರು? ಜ್ವಾಲಾಮಧ್ಯದಿಂದ ಹೊರಗೆ ಬರುತ್ತಿರುವವರು? ಮುಖಕ್ಕೆಲ್ಲಾ ಮಸಿ ಯನ್ನು ಬಳಿದುಕೊಂಡು ಗೋಣಿಯ ಚೀಲಗಳನ್ನು ಹೊದ್ದುಕೊಂಡು ಬರು ತ್ತಿರುವ ಇವರನ್ನು ನೋಡಿದಿರಾ? ಫರಂಗಿಗಳೇ! ಸೀಪಾಯಿಗಳ ಕಣ್ಣಿಗೆ ಬೀಳದಂತೆ ಪಾರಾಗಲು ವೇಷಾಂತರ ಹೊಂದಿದ್ದೀರಾ? ದಳ್ಳುರಿಯಲ್ಲಿ ನುಗ್ಗಿ ಆ ಸುಂದರಿಯನ್ನೇಕೆ ಎಳೆದುತರುತ್ತಿರುವವರು? ಅವಳನ್ನು ಕಠಾರಿ ಗಳಿಂದ ತಿವಿಯುತ್ತಿರುವರು! ಅವಳ ಶರೀರವು ಕೆಳಗೆ ಬಿದ್ದಿತು. ಭೀತಿ ಯಿಂದ ಹಾರುವ ಗಿಳಿಗಳ ತಲೆಗಳನ್ನು ಬೇಟೆಗಾರನು ಜಿಗುಟಿ ಬುಟ್ಟಿ ಯಲ್ಲಿ ಹಾಕಿಕೊಳ್ಳುತ್ತಿರುವಂತೆ ಓಡಿಬರುತ್ತಿರುವ ಫರಂಗಿಗಳನ್ನು ವಿಪ್ಲವ ಕಾರರು ಘಾತಿಸುತ್ತಿದ್ದಾರೆ. ಅಲ್ಲಿ ಬೀದಿಗಳಲ್ಲಿ ನೋಡಿರಿ! ವಿಪ್ಲವ ಕಾರರು ಫರಂಗೀ ರಕ್ತದಾಹಿಗಳಾಗಿ ಆಯುಧಗಳನ್ನು ಹಿಡಿದು ಓಡಿಯಾ ಡುತ್ತಿದ್ದಾರೆ.

ಬ್ರಿಗೇಡಿಯರ್ ವಿಲ್ಸನಿಂದ ಆಜ್ಞಾಪಿತನಾದ ಫರಂಗೀ ಸೈನ್ಯವು ವಿಪ್ಲವಕಾರರನ್ನು ಹುಡುಕಿಕೊಂಡು ಕಂಟೋನ್ಮೆಂಟಿನ ಕಡೆಗೆಹೋ ಯಿತು. ಮೈಲಿಗಳಗಟ್ಟಲೆ ಅವರು ನಡೆದು ಬರುವ ವೇಳೆಗೆ ಕಂಟೋ ನ್ಮೆಂಟು ಸ್ಮಶಾನ ಸದೃಶವಾಗಿದ್ದಿತು. ಉರಿಯುತ್ತಿರುವ ಮನೆಗಳು! ಬೀದಿಗಳಲ್ಲಿ ಫರಂಗೀ ಶವಗಳು! ಇವುಗಳ ವಿನಾ ಅವರಿಗೆ ಅಲ್ಲಿ ಇನ್ನೇನೂ ಕಾಣುಬರಲಿಲ್ಲ. ಆ ಗಾಢಾಂಧಕಾರದಲ್ಲಿ ವಿಪ್ಲವಕಾರರೂ ಅವರಿಗೆ ಕಾಣುಬರಲಿಲ್ಲ. ಪುನಃ ಅವರು ಪೆರೇಡ್ ಮೈದಾನಕ್ಕೆ ಬಂದರು.

ವಿಪ್ಲವಕಾರರು ಎಲ್ಲಿದ್ದಾರೆ? ಏನುಮಾಡುತ್ತಿದ್ದಾರೆ? ಅವರನ್ನೆಲ್ಲಿ ಹುಡುಕುವುದು ಇದೇ ಫರಂಗಿಗಳ ಮುಂದೆ ದೊಡ್ಡಪ್ರಶ್ನೆಯಾಗಿ ಉಳಿದಿದೆ.

ರಾತ್ರಿ ಮೂರು ಗಂಟೆಯ ಸಮಯವಾಯಿತು. ದೆಹಲಿಯ ದಾರಿಯಲ್ಲಿ "ಚಲೋದಿಲ್ಲಿ! ಚಲೋದಿಲ್ಲಿ" ಎಂಬ ಯುದ್ಧಘೋಷವು ಸಹಸ್ರ ಸಹಸ್ರ ಕಂಠಗಳಿಂದ ಕೇಳಿ ಬರುತ್ತಿತ್ತು. ಗರ್ಭನಿರ್ಭೇದವಾದ ಆ ಘೋಷಣೆಗಳನ್ನು ಕೇಳಿ ವಿಪ್ಲವಕಾರರು ದೆಹಲಿಯ ಕಡೆಗೆ ಹೋಗುತ್ತಿದ್ದಾರೆಂದು ಫರಂಗಿಗಳು ಊಹೆಮಾಡಿದರು. ದೆಹಲಿಯ ದಾರಿಯಲ್ಲಿ ಅವರನ್ನು ಅಡ್ಡ ಹಾಕುವ ಪ್ರಯತ್ನವನ್ನು ಮಾಡಿದರು.ಆದರೆ ಮಹಾವೇಗದಿಂದ ಹೋಗುತ್ತಿದ್ಧ ಆ ವಿಪ್ಲವಕಾರರನ್ನು ಅವರು ಸಂಧಿಸುವುದು ಸಾಧ್ಯವಾಗಲೇ ಇಲ್ಲ!

## ಬಾದಶಹನ ಭವನದಲ್ಲಿ

ಭಾರತದ ರಾಜಧಾನಿಯಾದ ದೆಹಲೀ ನಗರದ ಪುರಾತನ ರಾಜಮಂದಿರದಲ್ಲಿ ವೃದ್ಧಪುರುಷನೊಬ್ಬನು ಸುಖಾಸನದ ಮೇಲೆ ಕುಳಿತುಕೊಂಡಿದ್ದನು. ಆತನ ಬೆಳ್ಳಿಯ ಬಣ್ಣದ ಗಡ್ಡ ಮೀಸೆಗಳನ್ನು ನೋಡಿದರೆ ಅವನಿಗೆ ಅರವತ್ತೈದು ಎಪ್ಪತ್ತು ವರ್ಷಗಳಾಗಿದ್ದಿತೆಂದು ಹೇಳಬಹುದಾಗಿದ್ದಿತು. ತೇಜಃ ಪೂರ್ಣವಾಗಿದ್ದ ಆತನ ಮುಖಮಂಡಲದ ಮೇಲೆ ಮೋಡಗಳಂತೆ ಆಲೋಚನೆಗಳು ಕಂಡು ಬರುತ್ತಿದ್ದವು. ಅವನು ಸ್ಥಿರನಾಗಿ ಹುಕ್ಕಾಸೇವನೆ ಮಾಡುತ್ತಿದ್ದನು.

ಹಾಗೇ ಸ್ವಲ್ಪ ಹೊತ್ತು ಕಳೆಯಿತು. ಕುರೇಷನು ಆ ಮಂದಿರವನ್ನು ಪ್ರವೇಶಮಾಡಿ "ಬಾದಷಹ! ನಾನಾರಾಯನ ದಂಗೆಯು ಆರಂಭವಾಗಿದೆ" ಎಂದು ಹೇಳಿದನು.

"ಸರಿ! ಆಗಬೇಕಾದದ್ದೇ!" ಎಂದು ಹೇಳಿ ಬಾದಷಹನು ಅವನ ಮುಖವನ್ನು ನೋಡಿದನು.

"ಈಗ ನೀವೇನು ಮಾಡುತ್ತೀರಿ?" ಎಂಡು ಕುರೇಷನು ಕೇಳಿದನು.

ಅವನಾ ಪ್ರಶ್ನೆಯನ್ನು ಕೇಳಿದಾಗ ಬಾದಷಹನು ಹುಕ್ಕಾ ಸೇವನೆ ಮಾಡುತ್ತಿದ್ದನು. ಆದರಿಂದ ಕೂಡಲೇ ಉತ್ತರವನ್ನು ಕೊಡಲಾಗಲಿಲ್ಲ. ಬಾಯಿನಲ್ಲಿದ್ಧ ಹೊಗೆಯನ್ನು ನಿದಾನವಾಗಿ ಹೊರಗೆ ಬಿಟ್ಟು ಹುಕ್ಕಾ ಪಾತ್ರೆಯ ಕಡೆಗೆ ನೋಡಿದನು.

ಅದರಲ್ಲಿದ್ದ ಬೆಂಕಿಯು ಕಳಕಳಿಸುತ್ತಿತ್ತು. ಅದರಲ್ಲಿದ್ದ ನೀರು ಗುಡುಗುಡಿಸುತ್ತಿತ್ತು.

ವೃದ್ಧನಾದ ಮಹಾಪುರುಷನು "ನಾನೂ ಆ ಕಾಡು ಕಿಚ್ಚಿನಲ್ಲಿ ಧುಮುಕುತ್ತೇನೆ." ಎಂದು ಹೇಳಿದನು.

ಕುರೇಷನು ತಂದೆಯ ಕಡೆಗೆ ತಿಂದುಹಾಕುವಂತೆ ನೋಡಿದನು.

"ಯಾಕೆ? ಕುರೇಷ್? ಹಾಗೆ ನೋಡುತ್ತೀ?"

"ನೀವಿಂದು ಭಾರತದ ಬಾದಷಹರಲ್ಲ. ಅದು ನಾವು ಗೌರವ ದಿಂದ ಕರೆಯುವ ರೀತಿ. ನೀವು ನಾಮ ಮಾತ್ರ ಬಾದಷಹರು. ನಿಮಗೆ ಕಂಪನಿಯವರು ಪೆನ್ಷನ್ ಕೊಡುತ್ತಿದ್ದಾರೆ!"

"ಹೌದು! ನಾನು ಭಾರತದ ನಿಜವಾದ ಬಾದಷಹನಾಗಿದ್ದರೆ ಈ ವಿಪ್ಲವವೇ ಏಳುತ್ತಿರಲಿಲ್ಲ!"

"ನಿಮ್ಮನ್ನು ಕಂಪನಿಯವರು ದಸ್ತಗಿರಿಮಾಡುತ್ತಾರೆ. ಪೆನ್ಷನ್ ಕಿತ್ತು ಹಾಕುತ್ತಾರೆ! ನಾವೆಲ್ಲರೂ ಅನಾಥರಾಗುತ್ತೇವೆ"

"ಒಂದು ವೇಳೆ ದೈವಯೋಗವಿಲ್ಲದೇ ನಾವು ಸೋತರೆ ಹಾಗೂ ಆಗಬಹುದು"

"ಅದಾಗಕೂಡದು! ನಾವು ನಿಮ್ಮ ಮಕ್ಕಳು. ನಮ್ಮ ಹಕ್ಕು ವಂಶಪಾರಂಪರ್ಯವಾಗಿ ಬಂದದ್ದು. ನಿಮಗೆ ಸಾಯುವ ಕಾಲ. ನೀವು ನಮ್ಮ ಮುಂದಿನ ಭವಿಷ್ಯವನ್ನು ಮಣ್ಣುಗುಡಿಸಕೂಡದು. ನಾನಾಸಾಹೇಬನನ್ನು ಗಲ್ಲಿನ ಮರಕ್ಕೆ ಕಟ್ಟುತ್ತಾರೆ. ನಾವೀಗ ಕಂಪನಿಯವರ ಶರಣು ಹೋಗಬೇಕು" ಎಂದು ಕುರೇಷನು ಕೂಗಿಕೊಂಡನು.

"ಇಲ್ಲ! ಕೂಡದು. ನಾವಾರಿಗೂ ಶರಣಾಗತರಾಗುವುದಿಲ್ಲ" ಎನ್ನುತ್ತಾ ಸುಂದರಿಯೊಬ್ಬಳು ಒಳಗೆ ಬಂದಳು. ಅವಳ ಹಿಂದೆ ಮೊಗಲ್ ಯುವಾಪುರುಷನೊಬ್ಬನೂ ಬಂದನು.

ಕುರೇಷನು ಹುಬ್ಬು ಗಂಟು ಹಾಕಿಕೊಂಡು ನುಂಗಿಹಾಕುವಂತೆ ಅವಳ ಕಡೆಗೆ ನೋಡಿದನು.

ಆದರೆ ಜೀನತ್ ಬೇಗಂಳು ಅವನನ್ನುಲಕ್ಷ್ಯಮಾಡಲಿಲ್ಲ-"ಫಿರಂಗಿಯವರ ತೊತ್ತಾದ ನಿನಗೆ ಹಾಗೆ ತೋರುವುದು ಆಶ್ಚರ್ಯವಲ್ಲ. ಆದರೆ

ನೀನು ನಮ್ಮಾರನ್ನೂ ಮೋಸಮಾಡುವುದು ಸಾಧ್ಯವಿಲ್ಲ. ಹೊರಗೆ ಹೋಗು”–ಎಂದು ಹೇಳಿದಳು.

“ನನಗೆ ಅಧಿಕಾರವಿದೆ. ನಾನು ಮಾತನಾಡುತ್ತೇನೆ. ನಾನೇ ಮುಂದಿನ ಬಾದಷಹನೆಂದು ಕುಂಪಣಿಯವರು ಗೊತ್ತುಮಾಡಿದ್ದಾರೆ. ನಾನು ರಾಜಕುಮಾರ ನಾನು ಮಾತನಾಡುತ್ತೇನೆ. ಆದ್ದರಿಂದ ನಾನಿಲ್ಲಿರುತ್ತೇನೆ ನಾನು ಹೇಳಿದ ಹಾಗೆಯೇ ಎಲ್ಲವೂ ನಡೆಯುತ್ತದೆ?

“ನೀನು ಹೇಳಿದ ಹಾಗೆ ನಡೆಯುವುದೇನು? ಮಿರಾತ್‌ನಲ್ಲಿ ಕ್ರಾಂತಿಯಾಗಿದೆ. ಆ ಕ್ರಾಂತಿಯು ಈದಿನ ದೆಹಲಿ ನಗರವನ್ನು ಮುಟ್ಟಿದೆ. ಕ್ರಾಂತಿಯ ಮತ್ತೊಂದು ಬಾಹುವು ಮಹಾರಾಷ್ಟ್ರದಿಂದ ಬಂದು ದೆಹಲಿಯನ್ನು ಮುಟ್ಟುತ್ತದೆ. ಭಾರತದಲ್ಲಿಯೇ ಕ್ರಾಂತಿ ಜ್ವಾಲೆಗಳು ಹತ್ತಿ ಉರಿಯುತ್ತಿವೆ. ಈ ಅರಮನೆಯು ಸಹ ಕ್ರಾಂತಿಯ ಕೋರೆದಾಡೆಗಳಲ್ಲಿಯೇ ಇದೆ. ಯಾರಿದನ್ನು ತಡೆಯಲೆತ್ನಿಸುವರೋ ಅವರು ಅದರ ಕೋರೆದಾಡೆಗಳಲ್ಲಿ ಸಿಕ್ಕಿ ನುಚ್ಚು ನೂರಾಗುತ್ತಾರೆ”

“ಕಂಪನಿಯವರು ಇದನ್ನೆಲ್ಲಾ ತಡೆಯುತ್ತಾರೆ. ನಾವು ಕುಂಪಣಿಯವರಿಗೆ ಶರಣಾಗತರಾಗಿದ್ದೇವೆ. ಆಗ್ರಾದ ಗವರ್ನರ್ ಜನರಲ್‌ಗೆ ಬರದು ಕಳಿಸಿದ್ದೇನೆ. ದೆಹಲಿ ನಗರದಲ್ಲಿರುವ ಫರಂಗಿಯವರನ್ನು ನಾವು ರಕ್ಷಿಸುವುದಾಗಿ ಭರವಸೆ ಕೊಟ್ಟಿದ್ದೇವೆ. ಫ್ಲೇಜರನನ್ನೂ ಅವರ ಕುಟುಂಬದವರನ್ನೂ ಕರತರಲು ಪಲ್ಲಕ್ಕಿಯು ಹೋಗಿದೆ. ಅವರಿಗೆ ಈ ಅರಮನೆಯಲ್ಲಿ ಸ್ಥಳಕೊಡಲಾಗುತ್ತದೆ.”

ಬಾದಷಹನು ಮಾತಿನ ನಡುವೆ ಪ್ರವೇಶಮಾಡಿ–“ಕುರೇಷ್! ಏನು ಕೆಲಸಮಾಡಿಬಿಟ್ಟೆ? ಯಾಕೆ ಹೀಗೆ ಮಾಡಿದೆ?” ಎಂದು ಕೇಳಿದನು.

ಕುರೇಷನು ಉತ್ತರವನ್ನು ಹೇಳಲಿಲ್ಲ. ಅವನು ಮುಗುಳು ನಗೆ ನಗುತ್ತಿದ್ದನು.

ಜೀನತ್ ಬೇಗಂ ಹೇಳಿದಳು-“ಬಾದಷಹ! ತಾವು ಯೋಚನೆ ಮಾಡಬೇಕಾಗಿಲ್ಲ. ಆಗ್ರಾದಲ್ಲಿ ಕುಂಪಣಿಯವರ ಕಚೇರಿಯೇ ಇಲ್ಲ. ಗವರ್ನರ್ ಜನರಲ್ ಏನಾಗಿದ್ದಾನೆಯೋ ಗೊತ್ತಿಲ್ಲ. ಕುರೇಷನು ಕಳುಹಿಸಿದ ಪತ್ರವು ಅವನಿಗೆ ತಲುಪುವ ಸಂಭವವೇ ಇಲ್ಲ. ಫ್ಲೇರಜರನ್ನು

ಕರತರಲು ಹೋಗಿದ್ದ ಪಲ್ಲಕ್ಕಿಯು ವಾಪ್ಸ ಬರುತ್ತಿದೆ. ಅವನ ಮನೆಯು ಲೂಟಿಮಾಡಲ್ಪಟ್ಟಿದೆ. ಆ ಮನೆಯಲ್ಲಿ ಒಂದು ಬಿಳಿಯ ಪಿಳ್ಳೆಯನ್ನೂ ಬಿಡಿದಂತೆ ತುಂಡುಮಾಡಿ ಹಾಕಲಾಗಿದೆ. ಕ್ರಾಂತಿಯು ದೆಹಲಿ ನಗರ ದಲ್ಲಿಯೂ ಆರಂಭವಾಗಿದೆ-"

ಜೀನತ್ ಬೇಗಮಳೊಡನೆ ಬಂದ ಯುವಾಪುರುಷನಾದ ಮಿರ್ಜಾ ಮೊಗಲ್-"ಬಾದಷಹ! ಭಾರತದ ಸ್ವತಂತ್ರ ಸೇನೆಯು ಅರಮನೆಯ ಬಾಗಿಲಿನಲ್ಲಿ ನಿಂತು ತಮ್ಮ ದರ್ಶನಕ್ಕಾಗಿ ಕಾತುರವಾಗಿದೆ–" ಎಂದನು

ಅಷ್ಟು ಹೊತ್ತಿಗೆ ಅರಮನೆಯ ಹೊರಬಾಗಿಲಿನಿಂದ ಜಯಘೋ ಷಗಳು ಕೇಳಿ ಬಂದವು. ವಿಪ್ಲವಕಾರರು ಮೊಗಲ್ ಬಾದಷಹನ ಅರ ಮನೆಯನ್ನು ಪ್ರವೇಶಿಸುತ್ತಿದ್ದರು. ಹೊರಗಡೆಯ ಶಬ್ದವನ್ನು ಕೇಳಿ ಭಾರತದ ಚಕ್ರವರ್ತಿಯಾದ ಬಹದ್ದೂರ್ ಷಹನೂ ಅವನ ಮಗನಾದ ಮಿರ್ಜಾ ಮೊಗಲ್‌ನೂ ರಾಣಿಯಾದ ಜೀನತ್ ಮಹಲ್‌ಳೂ ಅರಮ ನೆಯ ಅಂತರ್ಗಹದಿಂದ ಹೊರಗೆ ಬಂದರು.

ಇವರುಗಳು ಹೊರಗೆ ಬರುವ ವೇಳೆಗೆ ವಿಪ್ಲವಕಾರರು ಅರಮನೆಯ ಸಭಾಂಗಣದಲ್ಲಿ ಬಂದು ತುಂಬಿದ್ದರು. ಬಹದ್ದೂರ್‌ಷಹನು ಬಂದು ದನ್ನು ನೋಡಿ-" ಕ್ರಾಂತಿಯು ವಿಜಯವಾಗಲಿ! " ಭಾರತದ ಚಕ್ರವರ್ತಿ ಯಾದ ಬಹದ್ದೂರ್ ಷಹನಿಗೆ ವಿಜಯವಾಗಲಿ!" ಎಂದು ಜಯ ಘೋಷಣೆಗಳನ್ನು ಮಾಡಿದರು.

ಮಿರ್ಜಾಮೊಗಲ್‌ನು-"ಬಾದಷಹ! ಸಮಗ್ರ ಭಾರತದಲ್ಲಿ ಕ್ರಾಂತಿ ಯಾಗಿದೆ. ಹಿಂದೂಸ್ಥಾನದ ರಾಜಧಾನಿಯಾದ ದೆಹಲಿ ನಗರವು ಸ್ವತಂ ತ್ರವಾಗಿದೆ. ದೆಹಲಿ ನಗರದಲ್ಲಿ ಕುಂಪಣಿಯವರ ಅಧಿಕಾರವು ನಾಶವಾ ಗಿರುವುದು ಸಮಗ್ರ ಭಾರತದಲ್ಲಿಯೂ ಇದೇ ರೀತಿ ಆಗುವುದೆಂಬುದಕ್ಕೆ ನಿದರ್ಶನವಾಗಿದೆ. ಈ ಮಹಾಕ್ರಾಂತಿಯ ನಾಯಕತ್ವವನ್ನು ತಾವು ವಹಿಸಿ ಮುಂದುವರಿಸ ಬೇಕೆಂಬುದು ಎಲ್ಲರ ಅಭಿಮತವಾಗಿದೆ–" ಎಂದು ಅರಿಕೆ ಮಾಡಿದನು.

ವಿಪ್ಲವಕಾರರು ಪುನಃ ಜಯಘೋಷವನ್ನು ಮಾಡಿ ತಮ್ಮ ಒಪ್ಪಿಗೆ ಯನ್ನು ಸೂಚಿಸಿದರು.

ವೃದ್ಧನಾದ ಬಾದಷಹನು ಸ್ಪಷ್ಟವಾದ ಮಾತುಗಳಿಂದ ಹೇಳಿದನು– ಫರಂಗಿಯವರು ನಮ್ಮ ದೇಶದಲ್ಲಿ ಬೇರೂರಿದ ದಿನದಿಂದಲೂ ಭಾರತದ ಇತಿಹಾಸವು ಕ್ರಾಂತಿಯ ಇತಿಹಾಸವಾಗಿದೆ. ಒಂದಾದನಂತರ ಮತ್ತೊಂದು ಕ್ರಾಂತಿಯು ನಡೆದು ಕುಂಪಣಿಯವರ ಅಡಳಿತವು ಸಡಲಿಸಲ್ಪಡುತ್ತಾ ಇದೆ. ಈ ಮಹಾಕ್ರಾಂತಿಯು ಈ ದೇಶದಲ್ಲಿ ಕುಂಪಣಿಯವರ ಅಧಿಕಾರವನ್ನು ನಿರ್ಮೂಲಮಾಡುತ್ತದೆ. ದೆಹಲಿಗೆ ವ್ಯಾಪಿಸಿರುವ ಈ ವಿಪ್ಲವದ ಅಧಿಕಾರವನ್ನು ನಾನು ಸ್ವೀಕರಿಸಿದ್ಧೇನೆ. ಆರಂಭವಾಗುವ ಮೊದಲೇ ಇದು ನನ್ನ ಹೆಸರಿನಲ್ಲಿ ನಡೆಯುವುದನ್ನು ನಾನು ಒಪ್ಪಿದ್ಧೇನೆ.

"ಈ ಕ್ರಾಂತಿ ಯುದ್ಧದಲ್ಲಿ ಮಿರ್ಜಾ ಮೊಗಲ್‌ನನ್ನು ಸೇನಾಧಿಪತಿಯಾಗಿ ನಿಯಮಿಸಿದ್ದೇನೆ. ಸೈನಿಕರೇ! ವಿಪ್ಲವಕಾರರೇ! ಭಾರತದ ಸ್ವಾತಂತ್ರ ನಿರ್ಮಾತರುಗಳೇ! ಜಯಘೋಷವನ್ನು ಮಾಡಿರಿ! ಅದು ಭಾರತದ ಮೂಲೆ ಮೂಲೆಗಳಲ್ಲಿಯೂ ಪ್ರತಿಧ್ವನಿತವಾಗಲಿ. ಕತ್ತಿಗಳನ್ನು ಮೇಲೆತ್ತಿ ಝಳಿಪಿಸಿರಿ! ಅದರ ಜಣಜಣಾತ್ಕಾರದಿಂದ ಭಾರತದ ಜನಗಳಲ್ಲಿ ವಿದ್ಯುತ್ ಸಂಚಾರವಾಗಲಿ. ವಿಪ್ಲವಕಾರರೇ! ನೀವು ಮುಂದೆ ಮುಂದೆ ಹೋಗಿರಿ. ನೀವು ಹೋದ ಕಡೆಗಳಲ್ಲೆಲ್ಲಾ ಭಾರತದ ದಾಸ್ಯ ಶೃಂಖಲೆಗಳು ಕಡಿದು ಬೀಳಲಿ.

"ವಿಪ್ಲವಕಾರರೇ! ನಿಮಗೆ ವಿಜಯವಾಗಲಿ. ದೇವರ ಆಶೀರ್ವಾದವು ನಿಮಗಿದೆ"

ವಿಪ್ಲವಕಾರರು ನೆರದಿದ್ದಂತಹ ಸಭಾಂಗಣದಲ್ಲಿ ಈ ಮಾತುಗಳನ್ನು ಹೇಳಿ ಬಾದಷಹನು ಅಂತರ್ಗೃಹಕ್ಕೆ ಹೊರಟು ಹೋದನು. ವಿಪ್ಲವಕಾರರು ಜಯಘೋಷಗಳನ್ನು ಮಾಡುತ್ತಾ ಅರಮನೆಯಿಂದ ದೆಹಲಿಯ ರಾಜ ಬೀದಿಗಳನ್ನು ಪ್ರವೇಶಮಾಡಿದರು.

## ದೆಹಲಿಯಲ್ಲಿ ವಿಪ್ಲವ

ಭಾರತದ ಹಲವಾರು ಕಡೆಗಳಲ್ಲಿ ವಿಪ್ಲವವು ಆರಂಭವಾದಂತೆ ದೆಹಲಿಯಲ್ಲಿಯೂ ವಿಪ್ಲವವು ಮೊದಲಾಗಿತ್ತು. ಭಾರತದ ರಾಜಧಾನಿಯಾದ ದೆಹಲೀ ನಗರವನ್ನು ಬ್ರಿಟಿಷ್ ಆಡಳಿತದಿಂದ ಬಿಡಿಸಲು ವಿಪ್ಲವಕಾರರು ಕೃತನಿಶ್ಚಯರಾಗಿದ್ಧರು. ಅದೇ ಕಾರಣದಿಂದ ಮೀರತ್‌ನ ಸೀಪಾಯಿಗೂ ಬಂದಿದ್ದರು. ಬೀದಿಗಳೆಲ್ಲವೂ ವಿಪ್ಲವಕಾರರಿಂದ ತುಂಬಿ

ಹೋಗಿದ್ದವು. ಎಲ್ಲಿ ನೋಡಿದರೂ ಕುದುರೆ ಸೈನಿಕರು ಪದಾತಿಗಳಿಂದ ತುಂಬಿ ಹೋಗಿತ್ತು. ನಾಗರಿಕರೂ ಆಯುಧಪಾಣಿಗಳಾಗಿ ತಿರುಗುತ್ತಿದ್ದರು.

ಹಿಮಾಚಲದಿಂದ ಹಿಡಿದು ಕನ್ಯಾಕುಮಾರಿಯವರೆಗೆ ಕ್ರಾಂತಿಯೆದ್ದಿದೆ ಎಂದೂ ಈ ಮಹಾ ಕ್ರಾಂತಿಗೆ ಸೀಪಾಯಿಗಳೂ ಸೇರಿದ್ದಾರೆಂದೂ ಜನ ಜನಿತವಾಗಿ ಹೋಗಿತ್ತು. ಅದರ ಮೇಲೆ ಮೀರತ್‌ನಿಂದ ಸೀಪಾಯಿಗಳು ಬಂದುದೂ ಮೊಗಲ್ ಬಾದಷಹನಾದ ಬಹದ್ದೂರ್‌ಷಹನು ಅವರಿಗೆ ಬೆಂಬಲವಾದುದೂ ಆ ನಂಬಿಕೆಯನ್ನು ನೂರ್ಮಡಿಯಾಗಿ ಹೆಚ್ಚಿಸಿದ್ದಿತು. ರಾತ್ರಿಯು ಕಳೆದು ಬೆಳಗಾಗುವುದರಲ್ಲಿ ಕುಂಪಣಿ ಸರ್ಕಾರದ ಆಡಳಿತವು ಮಾಯವಾದುದನ್ನು ನೋಡಿ ಅವರು ಅಚ್ಚರಿಗೊಂಡಿದ್ದರು. ಪುನಃ ಭಾರತದಲ್ಲಿ ದೇಶೀ ಅಧಿಕಾರವು ಬರುತ್ತದೆಂಬ ಆಸೆಯು ಅವರಲ್ಲಿ ಉಂಟಾಗಿದ್ದಿತು.

ಕುಂಪಣಿಯ ಅಧಿಕಾರಿಗಳಿಗೂ ಮತ್ತು ಫಿರಂಗಿಯ ಜನಗಳಿಗೂ ಇದು ಬಹಳ ಭ್ರಾಂತಿಯನ್ನುಂಟುಮಾಡಿತ್ತು. ದೆಹಲಿಯಲ್ಲಿ ಕ್ರಾಂತಿಯನ್ನು ಅವರು ಕಣ್ಣಾರೆ ಕಂಡಿದ್ದರು. ಫ್ರೇಜರ್–ಡೊಗ್ಲಾಸ್ ಮುಂತಾದವರ ಕೊಲೆಯನ್ನೂ ಅವರ ಹೆಂಡರು ಮಕ್ಕಳು ಕತ್ತರಿಸಿ ಹಾಕಲ್ಪಟ್ಟುದನ್ನೂ ಅವರು ಕೇಳಿದ್ದರು. ಇದೆಲ್ಲಾ ಅವರಿಗೆ ದಿಕ್ಕುತೋಚದಂತೆ ಮಾಡಿದೆ. ಕ್ರಾಂತಿಕಾರರು ತಮಗೆ ಬಹದ್ದೂರ್‌ಷಹನ ಬೆಂಬಲವಿದೆ ಎಂದು ಹೇಳುತ್ತಾರೆ. ಅದು ಹೇಗೆ? ಕಂಪನಿಯ ಪೇಂಷನ್‌ದಾರನಾಗಿರುವ ವೃದ್ಧ ಬಾದಷಹನು ಇಂತಹ ಪ್ರಮಾದದಲ್ಲಿ ಕೈಯಿಡುವುದಿಲ್ಲವೆಂದು ಅವರ ನಂಬಿಕೆ. ಕ್ರಾಂತಿಕಾರರು ಬಾದಷಹನ ಹೆಸರಿನಲ್ಲಿ ದೌರ್ಜನ್ಯವನ್ನು ಮಾಡುತ್ತಾರೆಂದು ಅವರ ಆಲೋಚನೆ. ಮೀರತ್‌ನಲ್ಲಿಯೂ ಕ್ರಾಂತಿಯಾಗಿದೆ ಎಂದು ಅವರು ಕೇಳಿದ್ದಾರೆ. ಆದರೆ ಅದರಲ್ಲಿ ಏನೋ ಬಡಾಯಿ ಇದೆ ಎಂದು ಅವರ ಭಾವನೆ. ಮೀರತ್‌ನಲ್ಲಿ ಕ್ರಾಂತಿಯಾದ ದಿನವೇ ಸೀಪಾಯಿಗಳು ಅಲ್ಲಿಂದ ಯಾಕೆ ಓಡಿಬಂದರು? ಕಂಪನಿಯ ಸೈನ್ಯವಿದ್ದೂ ಅವರೇಕೆ ಯುದ್ಧಮಾಡಲಿಲ್ಲ? ಮೀರತ್‌ನಲ್ಲಿರುವ ಇಂಗ್ಲಿಷ್ ಸೈನ್ಯಕ್ಕೆ ಹೆದರಿ ಇವರೆಲ್ಲಾ ಇಲ್ಲಿಗೆ ಓಡಿಬಂದಿದ್ದಾರೆ. ಒಂದೆರಡು ದಿನಗಳಲ್ಲಿಯೇ ಮೀರತ್‌ನಿಂದ ಸೈನ್ಯವು ಬರುತ್ತದೆ. ಅದು ಬಂದ ಕೂಡಲೇ ಈ ತುಂಟತನವೆಲ್ಲವೂ ಅಡಗಿ ಹೋಗುತ್ತದೆ. ಎಂದು ಸಮಾಧಾನವನ್ನು

ತಂದುಕೊಳ್ಳುತ್ತಿದ್ದರು. ದೆಹಲಿಯಲ್ಲಿ ತಮ್ಮ ಅಧೀನದಲ್ಲಿರುವ ಸೈನಿಕರೆಲ್ಲರಿಗೂ ಅವರು ಹೇಳಿದ್ದರು. “ನೀವು ಈ ತುಂಟತನಕ್ಕೆ ಸೇರಬೇಡಿರಿ. ಮೀರತ್‌ನಿಂದ ಸೈನ್ಯವು ಬರುತ್ತದೆ. ಇವರನ್ನೆಲ್ಲಾ ಬಡಿದುಹಾಕಲಾಗುತ್ತದೆ. ನೀವು ಸ್ವಾಮಿಭಕ್ತರಾಗಿರಿ. ನಿಮಗೆಲ್ಲಾ ಭಕ್ಷಿಸ್ ಸಿಗುತ್ತದೆ” ಎಂದು ಹೇಳಿದ್ದರು. ತಮ್ಮ ಅಧೀನದಲ್ಲಿರುವ ದೇಸೀ ಸೈನಿಕರು ಈ ಗಲಾಟೆಗೆಲ್ಲಾ ಹೋಗುವುದಿಲ್ಲವೆಂದೇ ಅವರ ನಂಬಿಕೆ.

ಮೊಗಲ್ ಬಾದಷಹನ ಅರಮನೆಗೆ ಸ್ವಲ್ಪ ದೂರದಲ್ಲಿಯೇ ಇಂಗ್ಲಿಷರು ಮದ್ದಿನ ಕೋಠಿಯನ್ನು ಮಾಡಿದ್ದರು. ಅಲ್ಲಿ ಬೇಕಾದಷ್ಟು ಮದ್ದು ಗುಂಡುಗಳೂ–ಯುದ್ಧಕ್ಕೆ ಬೇಕಾದ ಆಯುಧ ಸಲಕರಣೆಗಳೂ ಇದ್ದವು. ಅರಮನೆಯಿಂದ ಹೊರಬಿದ್ದ ವಿಪ್ಲವಕಾರರು ಮದ್ದಿನ ಕೋಠಿಯ ಕಡೆ ಬರುತ್ತಿದ್ದಾರೆಂದು ಅದರ ಕಾವಲಿನ ಅಧಿಕಾರಿಯಾಗಿದ್ದ ಉಲಿಗ್ಬಿಗೆ ವರ್ತಮಾನ ಸಿಕ್ಕಿತು. ವಿಪ್ಲವ ಕಾರರರಿಗೆ ಅದು ಸಿಕ್ಕದಂತೆ ಮಾಡಬೇಕೆಂದು ಅವನೂ ಸರ್ವ ಸನ್ನಾಹಗಳನ್ನೂ ಮಾಡಿದನು. ಕೋಠಿಯ ಹೊರಬಾಗಿಲನ್ನು ಹಾಕಿಸಿ ಅಲ್ಲಿ ಕೆಲವು ಫಿರಂಗಿಗಳನ್ನಿರಿಸಿದನು. ಸೈನಿಕರನ್ನು ಜಮಾಯಿಷಿ ಕಾವಲಿಟ್ಟನು. ಹೀಗೆ ವಿಪ್ಲವಕಾರರು ಬಂದರೆ ಅವರನ್ನೆದುರಿಸಲು ಸಿದ್ಧತೆಯಾಯಿತು.

ಅವನಿಗೆ ಬಂದ ವರ್ತಮಾನವು ಸರಿಯಾಗಿಯೇ ಇದ್ದಿತು. ರಾಜಭವನದಿಂದ ಹೊರಬಿದ್ದ ಸೈನಿಕರು ಸಮೀಪದಲ್ಲಿಯೇ ಇದ್ದ ಮದ್ದಿನ ಕೋಠಿಯ ಬಳಿಗೆ ಅನತಿ ಕಾಲದಲ್ಲಿಯೇ ಬಂದರು. ಶಿಸ್ತಿನಿಂದ ಬಂದು ಆ ಸೈನ್ಯವು ಕೋಠಿಯ ಬಾಗಿಲಿನಲ್ಲಿ ನಿಂತಿತು.

ಆದರೆ ಉಲಿಗ್ಬಿಯು ಎಣಿಸಿದ್ದಂತೆ ವಿಪ್ಲವಕಾರರು ಹಠಾತ್ತನೆ ಧಾಳಿಮಾಡಲಿಲ್ಲ. ನಾಯಕರಲ್ಲಿ ವಿಪ್ಲವಕಾರರಬ್ಬನು ಮುಂದೆ ಬಂದು ನಿಂತು- “ಈ ಮದ್ದಿನ ಕೋಠಿಯನ್ನು ಸ್ವಾಧೀನ ಪಡಿಸಿಕೊಳ್ಳ ಬೇಕೆಂದೂ ಇಲ್ಲಿ ಹೊಸ ಕಾವಲನ್ನು ಏರ್ಪಡಿಸ ಬೇಕೆಂದೂಹಿಂದೂಸ್ಥಾನದ ಬಾದಷಹನಅಪ್ಪಣೆಯಾಗಿದೆ. ನೀವುಗಳು ಇದನ್ನುಬಿಟ್ಟು ಕೊಡಬೇಕು” ಎಂದು ಕೇಳಿದನು.

ಇಂಗ್ಲೀಷ್ ಅಧಿಕಾರಿಯು ಏನನ್ನೂ ಹೇಳಲಿಲ್ಲ.

ವಿಪ್ಲವಕಾರ ನಾಯಕನು ಪುನಃ ಹೇಳಿದನು –“ನಿನ್ನ ಮೌನಕ್ಕೆ

ದಿಂದ ಸ್ವಾಧೀನಕ್ಕೆ ತೆಗೆದುಕೊಂಡು ಬಾದಷಹನ ಆಜ್ಞೆಯನ್ನು ಜಾರಿ ಮಾಡುತ್ತೇವೆ."

"ಬಾದಷಹನು ಆರೀತಿ ಹುಕುಂ ಮಾಡಿದ್ದಾನೆಂದು ನಾವು ನಂಬುವುದಿಲ್ಲ"

ವಿಪ್ಲವಕಾರನು ಬಾದಷಹನ ಹುಕುಂ ತೆಗೆದು ತೋರಿಸಿದನು.

"ಹಾಗಾದರೆ ಅವನು ಸ್ವಾಮಿದ್ರೋಹಿ! ವಿದ್ರೋಹಿಗಳ ಕಡೆ ಸೇರಿದ್ದಾನೆ. ಇದು ಕಂಪನಿಯವರ ಮದ್ದಿನ ಕೋಠಿ ಇಲ್ಲ ನಿಮ್ಮ ಬಾದಷಹನ ಹುಕುಂ ನಡೆಯುವುದಿಲ್ಲ!"

"ಮೂಢನೇ! ಇಂದು ಹಿಂದೂಸ್ಥಾನದ ಸರ್ವ ಅಧಿಕಾರವೂ ಬಾದಷಹನದು. ಏಕೆ ಹುಚ್ಚನಂತೆ ಮಾತನಾಡುತ್ತೀಯೆ! ಬಾದಷಹನ ಹುಕುಂಗೆತಲೆ ಬಾಗಿ ಹೊರಟುಹೋಗುವುದು ನಿಮಗೆಲ್ಲಾ ಕ್ಷೇಮಕರ"

"ನಿಮ್ಮಲ್ಲಿಯೂ ಸೈನ್ಯವಿದೆ. ನಾವು ಯುದ್ಧಮಾಡುತ್ತೇವೆ. ಕೋಠಿಯನ್ನು ಉಳಿಸಿಕೊಳ್ಳುತ್ತೇವೆ"

"ನೀನು ಒಂದು ನಿಮಿಷ ಕಾಲವೂ ಯುದ್ಧವನ್ನು ಮಾಡಲಾರೆ! ನಿನ್ನ ಸೈನ್ಯದಲ್ಲಿರುವವರೆಲ್ಲರೂ ದೇಶೀ ಜನಗಳು. ಅವರೊಬ್ಬರೂ ನಿನಗೆ ಬೆಂಬಲವಾಗುವುದಿಲ್ಲ. ಇಬ್ಬರು ಮೂರು ಮಂದಿ ಬಿಳಿಯ ಜನಗಳೊಂದಿಗೆ ನೀನೇನು ಮಾಡಬಲ್ಲೆ?

ಇವರು ಮಾತನಾಡುತ್ತಿರುವಂತೆಯೇ ಫಿರಂಗಿಗಳ ಬಳಿ ಇದ್ದ ನಾಲ್ಕೈದು ಜನ ಬಿಳಿಯರು ವಿಪ್ಲವಕಾರರ ಮೇಲೆ ಗುಂಡು ಹಾರಿಸಿದರು.

ಇಂಗ್ಲಿಷ್ ಅಧಿಕಾರಿಯು "ಅಲ್ಲಿ ನೋಡು! ನಿನಗೆ ಉತ್ತರವು ಬರುತ್ತಿದೆ–" ಎಂದು ಹೇಳಿದನು.

ವಿಪ್ಲವಕಾರರೂ ಮದ್ದಿನ ಕೋಠಿಯನ್ನು ಸುತ್ತುವರಿದರು. ಅದರ ಸುತ್ತಲೂ ಇದ್ದ ಗೋಡೆಯನ್ನು ಹತ್ತಲಾರಂಭಿಸಿದರು. ಒಳಗಿದ್ದ ದೇಶೀ ಸೈನಿಕರೂ ಇವರಿಗೆ ಸಹಾಯಕರಾದರು. ಮದ್ದಿನ ಕೋಠಿಯ ಮುಂದುಗಡೆ ಗುಂಡುಗಳನ್ನೂ ಫಿರಂಗಿಗಳನ್ನೂ ಹಾರಿಸುತ್ತ ಒಂಬತ್ತು ಮಂದಿ ಬಿಳಿಯ ಸೈನಿಕರು ಮಾತ್ರ ವಿಪ್ಲವಕಾರರನ್ನು ವಿರೋಧಿಸುತ್ತಿದ್ದರು.

ಉಲಿಗ್ಬಿಯು ಏರ್ಪಡಿಸಿದ ಪ್ರತಿರೋಧವು ಐದು ನಿಮಿಷಗಳ ಕಾಲವೂ ನಿಲ್ಲಲಿಲ್ಲ. ವಿಪ್ಲವಕಾರರು ಮದ್ದಿನ ಕೋಠಿಯ ಮೂರು ಕಡೆಗಳಲ್ಲಿಯೂ ಗೋಡೆಗಳನ್ನು ಹತ್ತಿ ಒಳಗೆ ನುಗ್ಗಿದರು. ಒಳಗಿನ ದೇಶೀ ಸೈನಿಕರೂ ವಿಪ್ಲವಕಾರರನ್ನು ಕೂಡಿಕೊಂಡಿದ್ದರು. ಮುಂದುಗಡೆ ನಿಂತಿದ್ದ ಫಿರಂಗಿ ಸೈನಿಕರ ಬಳಿ ಮದ್ದು ಗುಂಡುಗಳು ಮುಗಿದುಹೋದವು. ಕೋಠಿಗೆ ಹೋಗಿ ತರೋಣವೆಂದರೆ ಅದನ್ನು ವಿಪ್ಲವಕಾರರು ಸುತ್ತು ಕೊಂಡು ಬಿಟ್ಟಿದ್ದರು. ನಿರಾಶನಾದ ಉಲಿಗ್ಬಿಯು ಮದ್ದಿನ ಕೋಠಿಯನ್ನು ಸುಡುವ ಬತ್ತಿಗೆ ಬೆಂಕಿ ಹತ್ತಿಸಿ ಉಳಿದ ಒಬ್ಬಿಬ್ಬರು ಫಿರಂಗಿ ಸೈನಿಕರೊಡನೆ ಓಡಿಹೋದನು.

ಉಲಿಗ್ಬಿಯೂ ಅವನ ಸಂಗಡಿಗರೂ ಅಲ್ಲಿಂದ ದೆಹಲಿಯ ಕಂಟೋನ್ಮೆಂಟಿಗೆ ಹೋದರು. ಅವರು ಹೋಗುವ ವೇಳೆಗೆ ಅಲ್ಲಿಯೂ ವಿಪ್ಲವದ ಸಮಾಚಾರವು ಹರಡಿತ್ತು. ಮದ್ದಿನ ಕೋಠಿಯು ಆಸ್ಫೋಟನವಾದುದರಿಂದ ಉಂಟಾದ ಸಿಡಿಲಿನಂತ ಆರ್ಭಟವೂ, ಜ್ವಾಲಾಶಿಖೆಗಳಿಂದ ಕೂಡಿದ ಧೂಮರಾಶಿಯೂ ಅವರ ಹೃದಯಗಳು ಕಂಪಿಸುವಂತೆ ಮಾಡಿತ್ತು. ಉಲಿಗ್ಬಿಯು ಬಂದು ಅಲ್ಲಿ ನಡೆದ ಸಮಾಚಾರವೆಲ್ಲವನ್ನೂ ಹೇಳಿದನು.

ಅಲ್ಲಿದ್ದ ಫಿರಂಗಿಯವರೆಲ್ಲರೂ ಕೂಡಿ ಮುಂದಿನ ಮಾರ್ಗವನ್ನು ಕುರಿತು ಆಲೋಚಿಸಿದರು. ಬಹದ್ದೂರ್‌ಷಹನು ಸಹಾಯಮಾಡುತ್ತಾನೆಂಬ ನಂಬಿಕೆಯು ಅಷ್ಟು ಹೊತ್ತಿಗೆ ಅವರಿಗೆ ತಪ್ಪಿ ಹೋಗಿತ್ತು. ದೇಶೀ ಸೈನಿಕರು ತಮಗೆ ಬೆಂಬಲವಾಗುತ್ತಾರೆಂಬ ಭರವಸೆಯು ಮಾಯವಾಗಿತ್ತು. ಹೊರಗಿನಿಂದ ಸೈನ್ಯವು ಬರುತ್ತದೆಂಬ ನಿರೀಕ್ಷೆಯಿಲ್ಲ. ಮಹಾ ಸಮುದ್ರದಂತೆ ಬರುವ ವಿಪ್ಲವಕಾರರ ಸೈನ್ಯವನ್ನು ಎದುರಿಸುವುದು ಸಾಧ್ಯವಿಲ್ಲ. ಇಂತಹ ಸ್ಥಿತಿಯಲ್ಲಿ ಮಾಡುವುದೇನು ?

ಕೆಲವರು ಊರುಬಿಟ್ಟು ಓಡಿಹೋಗೋಣವೆಂದು ಸಲಹೆ ಮಾಡಿದರು; ಮತ್ತೆ ಕೆಲವರು-"ಎಲ್ಲಿ ಹೋದರೂ ಒಂದೇ ಕಥೆ. ಹೊರಗಿನಿಂದ ಸಹಾಯವನ್ನು ಪಡೆಯಲು ಯಾರನ್ನಾದರೂ ಕಳುಹಿಸಬೇಕು"–ಎಂದರು. ಇಲ್ಲಿಯೇ ಇರೋಣವೆನ್ನುವವರು "ನಾವೇನು ಅವರ ವಿರೋಧವಾಗಿ ಯುದ್ಧಮಾಡುತ್ತೇವೆಯೆ ? ನಮ್ಮ ಬಳಿ ಅವರಿಗೆ ಬೇಕಾದ್ದು ಏನಿದೆ ?

ಯಾಕೆ ಅವರು ನಮ್ಮನ್ನು ಮುತ್ತುತ್ತಾರೆ? ಮೀರಿ ಬಂದರೆ ಸೆರೆ ಹಿಡಿಯ ಬಹುದು. ನಮ್ಮ ಸೈನ್ಯ ಸಹಾಯವು ಬಂದನಂತರ ನಮ್ಮನ್ನು ಬಿಡಿಸಿ ಕೊಳ್ಳಲಾಗುತ್ತದೆ-" ಎಂದು ವಾದಿಸಿದರು. "ಯಾರನ್ನಾದರೂ ಮೀರತ್ ಗೆ ಕಳುಹಿಸಿ ಇಲ್ಲಿನ ಪರಿಸ್ಥಿತಿಯನ್ನು ತಿಳಿಸುವುದು ಮಾತ್ರ ಬಹಳ ಮುಖ್ಯ" ವೆಂದು ಹಠ ಹಿಡಿದರು.

ಆದರೆ ಇಂತಹ ಪರಿಸ್ಥಿತಿಯಲ್ಲಿ ದೆಹಲಿಯಿಂದ ಮೀರತ್‌ಗೆ ಹೋಗ ಬಲ್ಲವರಾರು? ಹೇಗೆ ಹೋಗುವುದು?

ಬಾರ್ಟ್ಸ್ ಎಂಬ ತರುಣನು ಮುಂದೆ ಬಂದು ತಾನು ಮೀರತ್‌ಗೆ ಹೋಗುವುದಾಗಿ ಹೇಳಿದನು. ಬ್ರಿಗೇಡಿಯರ್ ಗ್ರೇವ್ಸ್ ಪತ್ರವೊಂದು ಬರೆದು ಅವನಿಗೆ ಕೊಟ್ಟನು. ಬಾರ್ಟ್ಸ್ ಫಕೀರನ ವೇಷವನ್ನು ಹಾಕಿ ಕೊಂಡು ಮೀರತ್‌ನ ದಾರಿಯನ್ನು ಹಿಡಿದನು.

ಆದರೆ ಗ್ರೇವ್ಸ್‌ಗೆ ವಿಪ್ಲವಕಾರರು ತಮ್ಮನ್ನು ಸುಮ್ಮನೆ ಬಿಡುವರೆಂಬ ಭರವಸೆ ಇರಲಿಲ್ಲ. ಹೆಂಗಸರು ಮಕ್ಕಳನ್ನೆಲ್ಲಾ ಒಂದು ಬ್ಯಾರಕ್ಕಿನಲ್ಲಿರಿ ಸಿದನು. ಸಂದರ್ಭ ಬಂದರೆ ಸಹಾಯಕ್ಕಿರಲೆಂದು ಸೈನಿಕರೆಲ್ಲರನೂ ಅದರ ಮುಂದೆ ನಿಲ್ಲಿಸಿದನು.

ವಿಪ್ಲವಕಾರರು ಕಂಟೋನ್ಮೆಂಟಿಗೆ ಬಂದರು. ಕೆಲವರು ಫರಂಗೀ ಸೈನಿಕರೊಡನೆ ಯುದ್ಧಕ್ಕೆ ನಿಂತರು. ಮಿಕ್ಕವರು ಮುಂದೆ ಹೊರಟರು. ಸ್ವಲ್ಪ ಹೊತ್ತು ಪರಸ್ಪರ ಗುಂಡುಗಳನ್ನು ಹಾರಿಸಿದರು.

ಬ್ಯಾರಕ್ಕುಗಳ ಒಳಗೆ ಬ್ರಿಗೇಡಿಯರ್ ಗ್ರೇವ್ಸ್ ಕುಳಿತಿದ್ದನು. ದೆಹ ಲಿಯ ಇಂಗ್ಲಿಷ್ ಸೈನ್ಯದಲ್ಲಿದ್ದ ದೇಶೀ ಸೀಪಾಯಿಗಳು ವಿದ್ರೋಹಿಗ ಳೊಡನೆ ಸೇರಿಕೊಂಡು ಬಿಟ್ಟರೆಂದು ಅವನಿಗೆ ವರ್ತಮಾನವು ಬಂದಿತು. ಕಂಪನಿಯ ಕಚೇರಿಗಳೂ,ಖಜಾನೆಯೂ ಮುತ್ತಲ್ಪಟ್ಟಿದೆ- ಎಂದು. ತಿಳಿದು ಬಂದಿತು. ಫರಂಗಿಗಳ ಮನೆಗಳು ಲೂಟಿಮಾಡಲ್ಪಡುತ್ತಿವೆ–ಎಂದೂ ಗೊತ್ತಾಯಿತು.

ಗ್ರೇವ್ಸ್ ಹೊರಗೆ ಬಂದು ನೋಡಿದನು. ಶುಕ್ಲಪಕ್ಷದ ಬೆಳದಿಂಗಳಿನ ರಾತ್ರಿಯು ಭೀಕರ ರೂಪವನ್ನು ಪಡೆದಿದೆ. ಎಲ್ಲೆಲ್ಲಿಯೂ ಗುಂಡಿನ ಶಬ್ದವು ಕೇಳಿ ಬರುತ್ತಿದೆ. ದೂರದಲ್ಲಿ ಕಂಟೋನ್ಮೆಂಟಿನ ದೊಡ್ಡ ದೊಡ್ಡ ಭವನಗಳು ಹತ್ತಿ ಉರಿಯುತ್ತಿವೆ. ಅವುಗಳಿಂದ ಹೊರಟುತ್ತಿದ್ದ ಧೂಮವು

ಕಾರ್ಮೋಡಗಳಂತೆ ಚಂದ್ರನನ್ನು ಮುಚ್ಚುತ್ತಿವೆ. ಅಸಂಖ್ಯಾತರಾದ ವಿಪ್ಲವಕಾರರು ಗುಂಪುಗಂಪಾಗಿ ಓಡಿಯಾಡುತ್ತಿದ್ದಾರೆ.

ಸಮೀಪದಲ್ಲಿ ಬ್ಯಾರಕ್ಕುಗಳ ಮುಂದುಗಡೆ ವಿಪ್ಲವಕಾರರಿಗೂ ತನ್ನ ಸೈನಿಕರಿಗೂ ಯುದ್ಧವಾಗುತ್ತಿತ್ತು. ಗಳಿಗೆಗಳಿಗೆಗೂ ವಿಪ್ಲವಕಾರರ ಕೈ ಮೇಲಾಗುತ್ತಿತ್ತು. ಅಂದಿನ ಯುದ್ಧಕ್ಕೆ ಇಂಗ್ಲಿಷರ ಕಡೆಯ ಸೇನಾಧಿಕಾರಿಯಾಗಿದ್ದ ಗಾರ್ಡ್ ವಿಪ್ಲವಕಾರರು ಹಾರಿಸಿದ ಮೊದಲನೆಯ ಗುಂಡಿಗೇ ಸಿಕ್ಕಿ ಮರಣ ಹೊಂದಿದನು. ದಳಪತಿಗಳಾದ ಸ್ಮಿತ್,ರಿವೇಲಿಗಳು ಅಸುವನ್ನು ನೀಗಿದ್ದರು. ತನ್ನ ಸೈನಿಕರು ಕೇವಲ ಉನ್ಮಾದದಿಂದ ಹೋರುತ್ತಿರುವರೇ ವಿನಾ ಗೆಲ್ಲುವುದು ಅಸಂಭವವೆಂದು ಅವನಿಗೆ ಗೊತ್ತಾಯಿತು.

ಇತ್ತ ಬ್ಯಾರಕ್ಕುಗಳಲ್ಲಿದ್ದ ಹೆಂಗಸರು ಮಕ್ಕಳು ಗೋಳಾಡುತ್ತಿದ್ದರು. ತಂದೆಯನ್ನು ಕಳೆದುಕೊಂಡವರು–ಗಂಡನನ್ನು ಕಳೆದುಕೊಂಡವರು–ಅಣ್ಣ ತಮ್ಮಂದಿರನ್ನೂ ಮಕ್ಕಳನ್ನೂ ಕಳದುಕೊಂಡವರೂ ಗೋಳಾಡುತ್ತಿದ್ದರು. ಅರ್ಧ ಪ್ರಾಣವಿದ್ದ ತಮ್ಮವರ ಬಳಿ ಕುಳಿತು ಹೆಂಗಸರು ಆರ್ತನಾದ ಮಾಡುತ್ತಿದ್ದರು. ಉಳಿದವರು ತಮ್ಮವರೇನಾಗುವರೋ ಎಂದು ಕಾತುರದಿಂದ ಎದುರು ನೋಡುತ್ತಿದ್ದರು. ಯಾರನ್ನು ಯಾರು ಸಮಾಧಾನ ಮಾಡುವುದು !

ಯುದ್ಧಮಾಡದೇ ಅಲ್ಲೇ ಇದ್ದರೆ ಕತ್ತರಿಸಿ ಹಾಕುತ್ತಾರೆ. ಪ್ರತಿರೋಧಮಾಡಿದರೆ ಪ್ರಯೋಜನವಿಲ್ಲ–ಎಂದು ಮನದಟ್ಟಾಯಿತು. ಕಳೆದುಳಿದವರನ್ನೂ ಹೆಂಗಸರು ಮಕ್ಕಳನ್ನೂ ಕರೆದುಕೊಂಡು ಉಪಾಯಾಂತರದಿಂದ ಓಡಿಹೋಗಬೇಕೆಂದು ನಿರ್ಧರಿಸಿದರು.

ಬ್ಯಾರಕ್ಕಿನ ಹಿಂದೆ ದೊಡ್ಡದೊಂದು ಕಮರಿಯಿದ್ದಿತು. ಬ್ಯಾರಕ್ಕುಗಳಲ್ಲಿದ್ದ ಹೆಂಗಸರು ಮಕ್ಕಳನ್ನು ಅದರಲ್ಲಿಳಿಸಿದರು.ಗ್ರೇವ್ಸ್‌ನ ಮಾತಿನಂತೆ ಸಾಧ್ಯವಾದಷ್ಟು ಮಂದಿ ಯುದ್ಧಮಾಡುತ್ತಿದ್ದವರೂ ಓಡಿ ಬಂದರು.

ಆ ರಾತ್ರಿಯಲ್ಲಿ ಓಡಿಹೋಗುತ್ತಿದ್ದ ಇವರನ್ನು ವಿಪ್ಲವಕಾರರೂ ನೋಡಲಿಲ್ಲ.

## ಫರಂಗೀ ಫಕೀರ

ಪ್ರಾತಃಕಾಲ ಹತ್ತು ಹನ್ನೊಂದು ಗಂಟೆ ಇರಬಹುದು. ದೆಹಲಿಯ ಕಲ್ಕತ್ತಾ ಗೇಟಿಗೆ ಅಭಿಮುಖವಾಗಿ ಫಕೀರನೊಬ್ಬನು ಹೋಗುತ್ತಿದ್ದನು. ಆಗಾಗ ಹಿಂತಿರುಗಿ ನೋಡುತ್ತಾನೆ. ಅಕ್ಕ ಪಕ್ಕದಲ್ಲಿ ನೋಡುತ್ತಾನೆ. ಮುಂದೆ ಹೆಜ್ಜೆ ಯಿಕ್ಕಲೋ ಬೇಡವೋ ಎಂದು ಆಲೋಚನೆ ಮಾಡು ತ್ತಾನೆ. ಒಟ್ಟಿನಲ್ಲಿ ಅವನು ಗಾಬರಿಯಾಗಿದ್ದಾನೆ. ಹಾಗೆಯೇ ನಡೆದು ಮುಂದೆ ಹೋಗುತ್ತಿದ್ದಾನೆ.

ಬಹಳ ದೂರ ನಡೆದುಕೊಂಡು ಫಕೀರನು ಕಲ್ಕತ್ತಾ ಗೇಟಿನ ಹತ್ತಿರ ಹತ್ತಿರಕ್ಕೆ ಬಂದನು. ಸ್ವಲ್ಪದೂರದಲ್ಲಿ ಯಾರೋ ಗುಂಪು ಕೂಡಿ ಕೊಂಡಿದ್ದರು. ಅದೇನು ತೋರಿತೋ ಏನೋ ? ಅವನು ಮುಂದೆ ಹೋಗ ಲಿಲ್ಲ. ದಾರಿಯ ಪಕ್ಕದಲ್ಲಿ ಒಂದು ಜಗಲಿಯ ಮೇಲೆ ಕುಳಿತು ಕೊಂಡನು.

ಫಕೀರನು ಕುಳಿತುಕೊಂಡ ಜಗಲಿಯ ಬಳಿ ಕೆಲವರು ಹುಡಗರು ಆಟವಾಡುತ್ತಿದ್ದರು. ಸ್ವಲ್ಪ ಹೊತ್ತಿನ ಮೇಲೆ ಅವರ ದೃಷ್ಟಿಯು ಫಕೀ ರನ ಕಡೆಗೆ ತಿರುಗಿತು. ಸನ್ಯಾಸಿಗಳೂ ಫಕೀರರುಗಳೂ ಈ ಕ್ರಾಂತಿ ಯನ್ನು ಮಾಡಿಸಿದವರೆಂದು ಅವರು ಕೇಳಿದ್ದರು. ಇವನನ್ನು ಕೇಳಿದರೆ ಎಲ್ಲಾ ವಿಷಯಗಳೂ ತಿಳಿಯುತ್ತದೆಂಬ ಕುತೂಹಲದಿಂದ ಆ ಹುಡುಗರೆ ಲ್ಲರೂ ಬಂದು ಅವನ ಸುತ್ತಲೂ ಕುಳಿತುಕೊಂಡರು.

ಹುಡುಗರು ಬಂದು ಕುಳಿತುಕೊಂಡ ಕೂಡಲೇ ಫಕೀರನು ಅಲ್ಲಿಂದ ಮೇಲೆದ್ದನು. ಹುಡುಗರಲ್ಲೊಬ್ಬನು “ ಯಾಕೆ ? ಫಕೀರರೆ, ಮೇಲೇ ಳುತ್ತೀರಿ ? ಕುಳಿತುಕೊಳ್ಳಿ. ಎಂದನು.

ಅಷ್ಟು ಹೊತ್ತಿಗೆ ಕೆಲವು ಮಂದಿ ಶಸ್ತ್ರಧಾರಿಗಳು ಆ ಬೀದಿಯಲ್ಲಿ ಹೋದರು.

ಫಕೀರನು ಯಾತಕ್ಕೋ ಪುನಃ ಕುಳಿತುಕೊಂಡು ಬಿಟ್ಟನು. ಹುಡು ಗರು ಅವನು ತಮ್ಮ ಮಾತಿಗಾಗಿಯೇ ಕುಳಿತುಕೊಂಡನೆಂದುಕೊಂಡರು

ಆ ಹುಡುಗನು ಪುನಃ ಕೇಳಿದನು–“ ಫಕೀರರೇ ! ನೀವು ಕ್ರಾಂತಿ ಗಿಂತಲೂ ಮೊದಲು ಊರಿನಿಂದ ಊರಿಗೆ ಚಪಾತಿಗಳನ್ನು ತೆಗೆದುಕೊಂಡು

ಹೋಗಿ ಕೊಡುತ್ತಿದ್ದಿರಲ್ಲ. ಅದರಲ್ಲಿ ಏತಿರುತ್ತಿತ್ತು ? ಅದರ ಮಧ್ಯೆ ಕಾಗದವಿಡುತ್ತಿದ್ದಿರಾ ? ”

ಫಕೀರನು ಉತ್ತರವನ್ನು ಹೇಳಲಿಲ್ಲ. ತಲೆಯಾಡಿಸಿದನು ಹುಡುಗರು ಅದಕ್ಕೆ ಹೌದೆಂದು ಲರ್ಥಮಾಡಿದರು.

ಮತ್ತೊಬ್ಬ ಹುಡುಗನು-“ ಈಗ ಫರಂಗಿಗಳು ಏನುಮಾಡುತ್ತಾರೆ ? ” ಎಂದು ಕೇಳಿದನು.

ಈ ಬಾರಿಯೂ ಫಕೀರನು ಮಾತನಾಡಲಿಲ್ಲ. ಆ ಮಾತು ಕೇಳಿ ಆಕಾಶವನ್ನು ನೋಡಿದನು.

ಅಷ್ಟರಲ್ಲಿ ಮಗದೊಬ್ಬನು “ ಇವನು ಮೂಗಿ ಫಕೀರನೆಂದು ತೋರುತ್ತದೆ ! ” ಎಂದು ಹೇಳಿದನು.

ಇನ್ನೊಬ್ಬನು-“ ಫಕೀರರೇ ! ನಿಮಗೆ ಮಾತನಾಡಲು ಬರುವುದಿಲ್ಲವೇ ? ನೀವು ಮೂಗರೇ ? ” ಎಂದು ಕೇಳಿದನು.

ಮೊದಲನೆಯವನು “ ಹಾಗಾದರೆ ಪರ್ಷಿಯಾದ ಸುಲ್ತಾನರು ಭಾರತಕ್ಕೆ ಯಾವಾಗ ಬರುತ್ತಾರೆ, ಹೇಳಿರಿ ” ಎಂದನು.

ಫಕೀರನು-“ ನನಗಾವಿಷಯವು ಗೊತ್ತಿಲ್ಲ ” ಎಂದನು.

ಹುಡುಗರು-“ ಹಾಗಾದರೆ ನೀವೆಂತಹ ಫಕೀರರು ? ಫಿರಂಗಿಗಳು ಏನುಮಾಡುತ್ತಾರೆಂದರೆ ಆಕಾಶವನ್ನು ನೋಡುತ್ತೀರಿ ? ಪರ್ಷಿಯಾದ ಸುಲ್ತಾನರು ಯಾವಾಗ ಬರುತ್ತಾರೆಂದರೆ ಗೊತ್ತಿಲ್ಲವೆನ್ನುತ್ತೀರಿ ? ” ಎಂದರು.

ಫಕೀರನು-“ ಈ ರಾಜಕೀಯ ವಿಷಯಗಳು ನಮಗೆ ಗೊತ್ತಿಲ್ಲ ನಾವು ಖುದಾನ ರಾಜ್ಯದವರು ” ಎಂದು ಹೇಳಿದನು.

ಹುಡುಗರಿಗೆ ಖುದಾನರಾಜ್ಯದವರು ಬೇಕಾಗಿರಲಿಲ್ಲ. ಆ ತರುಣ ಫಕೀರನಲ್ಲಿ ಅವರಿಗೆ ಆಸಕ್ತಿಯು ಹೋಯಿತು. ಅವರು ಸುಮ್ಮನಿದ್ದರು. ಫಕೀರನೂ ಸ್ವಲ್ಪ ಹೊತ್ತು ಕುಳಿತಿದ್ದನು. ಕಲ್ಕತ್ತಾ ಗೇಟಿನ ಬಳಿ ಜನ ಜಂಗುಳಿಯು ಕಡಿಮೆಯಾಯಿತು. ಫಕೀರನು ಮೇಲೆದ್ದು ಅತ್ತಕಡೆಗೆ ಹೊರಟನು.

ಅವನು ಹೋಗುತ್ತಿದ್ದ ಹಾಗೆಯೇ ಹುಡುಗರಲ್ಲೊಬ್ಬನು “ ಲೋ ! ಇವನು ಠಕ್ಕು ಫಕೀರನಂತೆ ಕಂಡು ಬರುತ್ತಾನೆ ” ಎಂದನು.

ಹುಡುಗರು ಫಕೀರನ ಕಡೆಗೆ ದಿಟ್ಟಿಸಿ ನೋಡಿದರು. ಫಕೀರನು ಕತ್ತಿನಿಂದ ಕಾಲಿನವರೆಗೆ ಒಂದು ದೊಗಳೆಯ ಅಂಗಿಯನ್ನು ಹಾಕಿಕೊಂಡು ಕೈಯಲ್ಲೊಂದು ದೊಣ್ಣೆಯನ್ನು ಹಿಡಿದುಕೊಂಡಿದ್ದನು. ಕುಳ್ಳು ಶರೀರ. ಸಣ್ಣದಾದ ಹಣೆ. ಒಣಗಿಹೋದ ಕೆನ್ನೆಗಳು. ಮೊಟ್ಟೆಯಂತೆ ಕಾಣುವ ಮೂಗು. ಬೆಕ್ಕಿನಂತೆ ಪಿಳಪಿಳಗುಟ್ಟುವ ಕಣ್ಣುಗಳು. ಫಕೀರನು ನಡೆಯುವಾಗ ಆ ನಿಲುವಂಗಿಯು ಕಾಲಿಗೆ ತೊಡರುತ್ತಿತ್ತು. ಮುಳ್ಳಿನ ಮೇಲೆ ಕಾಲಿಡುವವನಂತೆ ನಡೆಯುತ್ತಿದ್ದನು. ಕಾಲುಗಳನ್ನು ನೋಡಿದರೆ ಎಂದೂ ಅವನು ಬರಿಗಾಲಿನಲ್ಲಿ ನಡೆದವನಂತೆ ಕಂಡುಬರುತ್ತಿರಲಿಲ್ಲ. ಒಟ್ಟಿನಲ್ಲಿ ಈ ಫಕೀರನ ರೀತಿಯು ವಿಚಿತ್ರವಾಗಿದ್ದಿತು.

ಈ ವಿಚಿತ್ರ ಫಕೀರನನ್ನು ನೋಡಿ ಹುಡುಗರಿಗೆ ಏನೋ ಒಂದು ಬಗೆಯ ಸಂದೇಹವು ಬಂದಿತು.

ಹುಡುಗರಲ್ಲಿ ಒಬ್ಬನು–"ಫಕೀರರೇ! ಅತ್ತ ಕಡೆಗೆ ಯಾಕೆ ಹೋಗುತ್ತೀರಿ? ಅದು ಮಾರತ್‌ಗೆ ಹೋಗುವ ದಾರಿ!" ಎಂದನು.

ಮತ್ತೊಬ್ಬನು–"ಇಲ್ಲಿಂದ ಹೊರಗೆ ಬಿಡುವುದಿಲ್ಲ. ಹೊರಗೆ ಹೋಗುವವರು ಚೌಕೀದಾರನ ರಹದಾರಿಯನ್ನು ತೆಗೆದುಕೊಳ್ಳಬೇಕು" ಎಂದನು.

ಫಕೀರನು ಹಠಾತ್ತನೆ ಹಿಂತಿರುಗಿ ನೋಡಿದನು. ಮನೆಯ ಪಕ್ಕದಲ್ಲಿ ಹುಡುಗರು ನಿಂತಿದ್ದುದನ್ನು ನೋಡಿದನು. ಪುನಃ ಅವನು ಮನೆಯ ಜಗುಲಿಯ ಮೇಲೆ ಕುಳಿತುಕೊಳ್ಳಲಿಲ್ಲ. ಬಂದ ದಾರಿಯನ್ನು ಹಿಡಿದು ಹೋಗಲಾರಂಭಿಸಿದನು.

ಅದೇ ಹುಡುಗನು ಕೇಳಿದನು "ಯಾಕೆ, ಫಕೀರರೇ! ಹಿಂತಿರುಗಿ ಬಂದಿರಿ. ಹೊರಗೆ ಹೋಗುವುದಿಲ್ಲವೇ?"

ಫಕೀರನು ಮಾತನಾಡಲಿಲ್ಲ. ಮೌನವಾಗಿ ನಡೆಯುತ್ತಿದ್ದನು.

ಮತ್ತೊಬ್ಬನು ಹೇಳಿದನು. "ಫಕೀರರೇ! ಇವನು ಹರಾಂ, ನೀವು ಹೋಗಿರಿ. ರಹದಾರಿಯು ಬೇಕಾಗಿಲ್ಲ"

ಫಕೀರನು ಜೋರು ಜೋರಾಗಿ ನಡೆಯಲಾರಂಭಿಸಿದನು.

ಹುಡುಗರೂ ಗುಂಪಾಗಿ ಅವನ ಹಿಂದೆ ನಡೆದರು.

ಒಬ್ಬ ಹುಡುಗನು ಹಾಡಿದನು. ಪಿಳಪಿಳ ನೋಡುವ ಬೆಕ್ಕಿನ ಕಣ್ಣು, ಗಡ್ಡವೇಇಲ್ಲದ ಬೋಳು ಫಕೀರ. ಇತರ ಹುಡುಗರೆಲ್ಲರೂ ನಕ್ಕರು.

ಅಷ್ಟು ಹೊತ್ತಿಗೆ ಫಕೀರನಿಗೆ ಅಳು ಬರುವಂತಾಗಿತ್ತು. ಅವನು ಹುಡುಗರ ಕಡೆಗೆ ದೈನ್ಯದಿಂದ ನೋಡಿ-" ಮಕ್ಕಳೇ! ಖುದಾನ ಜನಗಳನ್ನು ಈ ರೀತಿ ಹಿಂಸಿಸಬಾರದು. ನನ್ನನ್ನೇಕೆ ಗೋಳು ಹೊಯ್ದುಕೊಳ್ಳುತ್ತೀರಿ?" ಎಂದನು.

ಮೊದಲು ಹಾಡಿದ ಹುಡುಗನೇ ಹಾಡಿದನು-
ಲೋಕವ ನರಿಯದ ಮುಡ್ಡಿ ಫಕೀರ–
ನಾಕವು ಸಿಗುವುದೆ ಗೊಡ್ಡು ಫಕೀರ.
ಇತರರು ನಕ್ಕರು.

ಹುಡುಗರು ಫಕೀರನನ್ನು ಬಿಡಲಿಲ್ಲ. ಫಕೀರನಿಗೆ ಹುಡುಗರ ಈ ವರ್ತನೆಯಿಂದ ಹೆದರಿಕೆಯಾಯಿತು. ಏನಾದರೂ ಮಾಡಿ ಇದರಿಂದ ತಪ್ಪಿಸಿಕೊಳ್ಳದಿದ್ದರೆ ತನಗೆ ಉಳಿಗಾಲವಿಲ್ಲವೆಂದು ಯೋಚಿಸಿದನು. ಕೋಪಗೊಂಡವನಂತೆ ಹುಡುಗರ ಕಡೆಗೆ ನೋಡಿ-" ನೀವು ಹೋದರೆ ಒಳ್ಳೆಯದು. ಇಲ್ಲದಿದ್ದರೆ ಮಂತ್ರ ಹಾಕುತ್ತೇನೆ-" ಎಂದು ಹೇಳಿ ಬೀದಿಯ ಮಣ್ಣನ್ನು ಒಂದು ಹಿಡಿಯಲ್ಲಿ ತೆಗೆದು ಮಂತ್ರಿಸಿ " ಚೂ-ಚೂ " ಎಂದು ಹುಡುಗರ ಮೇಲೆ ಊದಿದನು.

ಫಕೀರನ ಮಂತ್ರದಿಂದ ಏನಾಗುವುದೋ ಎಂದು ಹುಡುಗರು ಮೊದಲು ಯೋಚಿಸಿದ್ದರು. ಆದರೆ ಅದರಿಂದ ಏನೂ ಆಗಲಿಲ್ಲ. ಈ ಫಕೀರನಿಗೆ ತಂತ್ರ ಮಂತ್ರಗಳು ಬರುವುದಿಲ್ಲವೆಂದು ಹುಡುಗರ ಧೈರ್ಯವು ಹೆಚ್ಚಾಯಿತು.

ಮೂರು ನಾಲ್ಕು ಮಂದಿ ಹುಡುಗರು ಸೇರಿ ಹಾಡಿದರು.
ಬೆಕ್ಕಿನ ಕಣ್ಣಿನ ಠಕ್ಕು ಫಕೀರ
ಚಕ್ಕನೆ ನಡೆಯದೆ ಹೊಂಚುವುದೇಕೆ ?

ಫಕೀರನಿಗಿನ್ನು ತಡೆಯಾಗಲಿಲ್ಲ. ಅವನು ಓಡಲಾರಂಭಿಸಿದನು. ಹುಡುಗರೂ ಅವನ ಹಿಂದೆ ಓಡಿದರು.

ಆ ದೊಗಳೆಯ ನಿಲುವಂಗಿಯನ್ನು ಹಾಕಿಕೊಂಡು ನಡೆಯಲಾರದೇ ಕಾಲು ತೊಡರಿಸಿ ಫಕೀರನು ಕೆಳಗಡೆ ಬಿದ್ದನು. ಮಂಡಿ ಮೊಖಗಳು ತರಚಿಹೋದವು. ಅಂಗಿಯು ಹರಿದು ಹೋಯಿತು.

ಹುಡುಗರು ಘೊಳ್ಳನೆ ನಕ್ಕರು.

ಫಕೀರನು ಎದ್ದು ಕುಂಟುತ್ತಾ ನಡೆದರೆ ಹುಡುಗರು ಕಿರುಚುತ್ತಾ, ಕೂಗುತ್ತಾ ಅವನ ಹಿಂದೆ ಹೋದರು.

ಹೀಗೆಯೇ ಈ ಮೆರವಣಿಗೆಯು ಸ್ವಲ್ಪ ದೂರ ನಡೆಯಿತು. ಯಾರೋ ದಾರಿಹೋಕನು ಎದುರಿಗೆ ಬರುತ್ತಿದ್ದನು. ಅವನು ಈ ತುಂಟತನವನ್ನು ನೋಡಿ– "ಫಕೀರನನ್ನು ಯಾಕೆ ಗೋಳು ಹುಯ್ದು ಕೊಳ್ಳುತ್ತಿರೋ ?" ಎಂದನು.

ಹುಡುಗರು– "ಇವನು ಫಕೀರನಲ್ಲ. ಕಳ್ಳ. ಫಕೀರನ ವೇಷವನ್ನು ಹಾಕಿಕೊಂಡಿದ್ದಾನೆ." ಎಂದರು.

ದಾರಿಹೋಕನು ನಿಂತನು. ಫಕೀರನನ್ನು ನೋಡಿದನು. ದಾರಿಹೋಕನಿಗೂ ಇವನು ಸಹಜವಾದ ಫಕೀರನಂತೆ ಕಂಡು ಬರಲಿಲ್ಲ. ಏನೋ ಸಂದೇಹಾತ್ಮಕವಾಗಿ ತೋರಿತು.

ಅವನು ಕೇಳಿದನು– "ಫಕೀರನೇ! ನೀನು ಯಾವ ಊರಿನವನು?" ಫಕೀರನು "ನಾನು ಇದೇ ಊರಿನವನು" ಎಂದು ಉತ್ತರ ಹೇಳಿದನು.

"ಈ ಊರಿನಲ್ಲಿ ಎಲ್ಲಿದ್ದಿಯೇ ?"

ಜವಾಬು ಹೇಳಲು ಫಕೀರನು ಹಿಂದೆ ಮುಂದೆ ನೋಡಿದನು. ಉತ್ತರವನ್ನು ಹೇಳಲು ತಡಬಡಿಸಿದನು.

"ನೀನು ಇದೇ ಊರಿನವನಾದರೆ ಎಲ್ಲಿದ್ದೀ, ಎಂದು ಹೇಳಲು ಸಂಕೋಚ ಮಾಡುತ್ತೀ ಯಾಕೆ ?"

ಫಕೀರನು ಉತ್ತರ ಹೇಳಲಿಲ್ಲ.

ಹುಡುಗನೊಬ್ಬನು ಪುನಃ ಹಾಡಿದನು.

ಬೆಕ್ಕಿನ ಕಣ್ಣಿನ ಠಕ್ಕು ಫಕೀರ
ಚಕ್ಕನೆ ನಡೆಯದೆ ಹೊಂಚುವುದೇಕೆ ?

ಹುಡುಗರು ನಕ್ಕರು. ಕಿರಚಿ ಕೊಳ್ಳಲಾರಂಭಿಸಿದರು.

ದಾರಿಹೋಕನಿಗೂ ಹುಡುಗರು ಹೇಳುವುದು ಸರಿ ಎಂದು ತೋರಿತು.

“ ಫಕೀರನೇ, ನಿನ್ನನ್ನು ನೋಡಿದರೆ ಸಂದೇಹವು ಬರುತ್ತದೆ. ನಿನ್ನ ಮುಖ ನಿನ್ನ ಕಣ್ಣುಗಳನ್ನು ನೋಡಿದರೆ ನೀನು ಹಿಂದೂಸ್ಥಾನದವನಂತೆ ಕಂಡುಬರುವುದಿಲ್ಲ. ಚಲ್ತೀ ಜಬಾನಿಯು ನಿನ್ನ ನಾಲಿಗೆಯಲ್ಲಿ ತೊಡರುತ್ತದೆ. ನೀನು ಛದ್ಮವೇಷಧಾರಿಯಾದ ಫಕೀರನಿರಬೇಕು. ” ಎಂದನು.

ಹುಡುಗರಲ್ಲಿ ಕೆಲವರು “ ಫರಂಗೀ ಫಕೀರ ” ಎಂದು ಕೂಗಿಕೊಂಡರು. ಮತ್ತೆ ಕೆಲವರು “ ಫರಂಗೀಕೋ. ಮಾರೋ ” ಎಂದು ಕೂಗಿಕೊಂಡರು. ಎಲ್ಲರೂ ಅವನನ್ನು ಸುತ್ತಿಕೊಂಡರು.

ಈ ಗಲಭೆಯಿಂದ ಫಕೀರನಿಗೆ ಜಂಗಾಬಲವೇ ಹೋದಂತೆ ಆಯಿತು. ಇನ್ನು ತನಗೆ ಕಡೆಗಾಲ ಬಂದಿತೆಂದು ತಿಳಿದುಕೊಂಡನು. ಆ ಫಕೀರನು ಬ್ರಿಗೆಡಿಯರ್ ಗ್ರೇವ್ಸ್ ಮೀರತ್‌ನ ಕುಂಪಣಿ ಅಧಿಕಾರಿಗಳಿಗೆ ಬರೆದು ಕೊಟ್ಟಿದ್ದ ಕಾಗದವನ್ನು ಕೊಂಡು ಹೋಗುತ್ತಿದ್ದನು. ಅದು ಸಿಕ್ಕಿದರೆ ತನ್ನನ್ನು ಕಡಿದು ಹಾಕಿ ಬಿಡುವರೆಂದು ಅವನು ನಡುಗಿದನು. ಸೊಂಟದಿಂದಾ ಕಾಗದವನ್ನು ತೆಗೆದು ಬಾಯಲ್ಲಿ ಹಾಕಿಕೊಂಡು ಅಗಿದು ನುಂಗಿಬಿಟ್ಟನು.

ಹುಡುಗರು ಇನ್ನೂ ಅವನ ಬಳಿ ಏನಿದೆಯೋ ಎಂದು ಸಂದೇಹಪಟ್ಟು ಅವನನ್ನು ಹುಡುಕಲು ವೊದಲು ಮಾಡಿದರು. ಆರಭಸದಲ್ಲಿ ಅವನ ಅಂಗಿ ಎಲ್ಲಾ ಹರಿದು ಕಿತ್ತುಹೋಯಿತು.

ಅಷ್ಟು ಹೊತ್ತಿಗೆ ನಾಲ್ಕೈದು ಮಂದಿ ಸೀಪಾಯಿಗಳು ಒಬ್ಬ ಫರಂಗೀ ಮಹಿಳೆಯನ್ನು ಹಿಡಿದುಕೊಂಡು ಈ ಹುಡುಗರ ಗುಂಪಿದ್ದ ಕಡೆಗೆ ಬಂದರು. ಹುಡುಗರು ಅವರಿಗೆ–“ ಇಲ್ಲೊಬ್ಬ ಫರಂಗೀ ಫಕೀರನೊಬ್ಬ ನಿದ್ದಾನೆ. ಅವನು ಸಂಸಾರಿಯಾಗಬೇಕಂತೆ. ಅವಳೊಡನೆ ಇವನಿಗೆ ಮದುವೆ ಮಾಡೋಣ ! ” ಎಂದು ಕೂಗಿದರು.

ಹುಡುಗರಲ್ಲೊಬ್ಬನು–“ ಏನು ಫಕೀರರೇ ! ಮದುವೆಯಾಗುತ್ತೀರಾ ?” ಎಂದು ಕೇಳಿದನು.

ಫಕೀರನು ಆ ಹೆಂಗಸಿನ ಕಡೆಗೆ ನೋಡಿದನು. ಅವಳು ಆಲ್ಡ್‌ವೆಲ್ ಎಂದು ಅವನಿಗೆ ಗೊತ್ತಾಯಿತು. ಅವಳೂ ಫಕೀರನನ್ನು ಗುರ್ತಿಸಿದಳು. ಆದರೆ ಅವರು ಒಬ್ಬರಿಗೊಬ್ಬರು ಮಾತನಾಡಲಿಲ್ಲ.

ಹೆಂಗಸನ್ನು ಹಿಡಿದುಕೊಂಡು ಹೋಗುತ್ತಿದ್ದ ಸೀಪಾಯಿಗಳು ಹುಡುಗರ ಬಳಿಗೆ ಬಂದು ಗಲಾಟೆ ಏನೆಂದು ವಿಚಾರಿಸಿದರು.

ಹುಡುಗರು-"ಸೀಪಾಯಿಗಳೇ, ಇವನೊಬ್ಬ ಕಳ್ಳ ಫಕೀರ. ಫರಂಗಿಯವನು. ನಾವು ಇವನನ್ನು ಹಿಡಿದೆವು. ಇವನ ಬಳಿ ಒಂದು ಕಾಗದವಿತ್ತು. ಅದನ್ನು ತಿಂದುಹಾಕಿಬಿಟ್ಟ."-ಎಂದು ಹೇಳಿದರು.

ಸೀಪಾಯಿಗಳು ಅವನನ್ನು ಹಿಡಿದುಕೊಂಡು ಹುಡುಗರಿಗೆ "ನಾವು ಇವನನ್ನು ವಿಚಾರಿಸುತ್ತೇವೆ. ನೀವು ಹೋಗಿರಿ" ಎಂದು ಹೇಳಿದರು.

ಅವರಿಗೆ ಫಕೀರನು ಯಾರೋ ಫರಂಗಿಯವನೆಂದು ಗೊತ್ತಾಯಿತು. ಫರಂಗಿಯವನಾದರೆ ಕಡಿದು ಹಾಕಬೇಕು. ಅಥವಾ ಕಾರಾಗಾರದಲ್ಲಿ ಕೂಡಬೇಕು. ಅವನ ಪೂರ್ವೋತ್ತರಗಳನ್ನು ಕೇಳುವುದೇನು!? ಹೆಂಗಸಿನೊಡನೆ ಅವನನ್ನೂ ಕರೆದುಕೊಂಡು ಹೊರಟರು. ಹುಡುಗರೂ ಸ್ವಲ್ಪ ದೂರ ಹೋದರು. ಆದರೆ-ಸೀಪಾಯಿಗಳು ಬಂದನಂತರ ಹುಡುಗರಿಗೆ ತಮಾಷೆಯೇನೂ ಸಿಕ್ಕಲಿಲ್ಲ. ಅವರು ವಾಪ್ಸು ಹೊರಟುಹೋದರು.

ಸೀಪಾಯಿಗಳು ಈ ಬಂದಿಗಳನ್ನು ದೆಹಲಿಯ ಅರಮನೆಗೆ ಕರೆದುಕೊಂಡು ಹೋದರು. ಅರಮನೆಯ ಹಿಂದುಗಡೆಯಿಂದ ಹೋದರೆ ಕೆಳ ಅಂತಸ್ಥಿನಲ್ಲಿ ಗುಹೆಯಂತಹ ಒಂದು ದಾರಿ. ಆ ದಾರಿಯಲ್ಲಿ ಬಂದಿಗಳನ್ನು ಕರದುಕೊಂಡು ಹೋದರು. ಎದುರಿಗೆ ಮತ್ತೊಂದು ಬಾಗಿಲು. ಅದನ್ನು ದಾಟಿ ಐದತ್ತು ಗಜಗಳಷ್ಟು ದೂರ ನಡೆದರೆ ಒಂದು ಕೋಣೆ. ಸೀಪಾಯಿಗಳಲ್ಲಿ ಮುಖ್ಯಸ್ಥನಂತಿದ್ದವನೊಬ್ಬನು ತನ್ನ ಜೊತೆಗಾರರನ್ನು ಅಲ್ಲಿಯೇ ನಿಲ್ಲಿಸಿ,ಬಂದಿಗಳನ್ನು ಕರದುಕೊಂಡು ಎದುರಿಗಿದ್ದ ಕೋಣೆಯ ಕಡೆಗೆ ಹೋದನು.

ಹೋಗುವಾಗ ಆ ಸೀಪಾಯಿಯು ಫರಂಗೀ ಹೆಂಗಸನ್ನು ಉದ್ದೇಶ ಮಾಡಿ-"ಅಲ್ಲಾ! ನೀನು ಎಲ್ಲಿ ಸಿಕ್ಕಿ ಹಾಕಿಕೊಂಡೆ?" ಎಂದು ಕೇಳಿದನು.

ಆ ಹೆಂಗಸು-"ಗುಲಾಂ! ನಾನು ನಿನ್ನನ್ನೇ ಹುಡುಕಿಕೊಂಡು ಬಂದೆ. ಹೊರಗಿರುವ ಸೀಪಾಯಿಗಳು ನನ್ನನ್ನು ಹಿಡಿದುಕೊಂಡರು. ನೀನು ಬರುವವರೆಗೆ ನನಗೆ ಜೀವವೇ ಹೋದಹಾಗಿತ್ತು," ಎಂದಳು.

ಗುಲಾಮನು-"ಆದಿರಲಿ. ಈಗ ನೀನು ಇಲ್ಲಿರು. ಸುಮಾರು ರಾತ್ರಿ ಒಂದು ಗಂಟೆಯ ವೇಳೆಗೆ ಬಂದು ನಿನ್ನನ್ನು ಬಿಡಿಸಿಕೊಂಡು ಹೋಗುತ್ತೇನೆ." ಎಂದನು.

ಗುಲಾಮನು ಹೋದ ಕೂಡಲೇ ಬಾಗಿಲಿನ ಬಳಿ ಪಹರೆ ಕೊಡುತ್ತಿದ್ದವರು ಅವನಿಗೆ ಸಲಾಂ ಮಾಡಿದರು. ಗುಲಾಮನು "ಇವರನ್ನು ಒಳಗೆ ಕೂಡು." ಎಂದು ಹೇಳಿ ಹೊರಟುಹೋದನು.

ಪಹರೆಯವರು ಬಾಗಿಲು ತೆರೆದು ಆಲ್ಡ್ವೆಲ್‌ಳನ್ನೂ ಫಕೀರನನ್ನೂ ಒಳಗೆ ಕೂಡಿದರು. ಅದೊಂದು ಉದ್ದವಾದ ಸಣ್ಣಕೋಣೆ. ಎಲ್ಲೋ ಒಂದೆರಡು ಕಿಟಕಿಗಳಿದ್ದವು. ಅಲ್ಲಿಲ್ಲಾ ಕತ್ತಲು. ಬೆಳಕು ಗಾಳಿಗಳು ಬರುತ್ತಿರಲಿಲ್ಲ. ಅಲ್ಲಿ ಸುಮಾರು ಐವತ್ತು ಮಂದಿ ಹೆಂಗಸರು ಮಕ್ಕಳನ್ನು ಕೂಡಿಹಾಕಿದ್ದರು. ಕೆಲವು ಮಂದಿ ಗಂಡಸರೂ ಇದ್ದರು. ನೆಲಕ್ಕೆ ಚಪ್ಪಡೀ ಕಲ್ಲುಗಳನ್ನು ಹಾಸಿದ್ದರು. ಅದರ ಮೇಲೆ ಕೆಲವರು ಮಲಗಿಕೊಂಡಿದ್ದರು. ಕೆಲವರು ಕುಳಿತಿದ್ದರು. ಇದರ ಮಧ್ಯೆ ಮಕ್ಕಳ ರೋಧನ ಧ್ವನಿಯು ಬೇರೇ ಕೇಳಿಬರುತ್ತಿತ್ತು.

ಆಲ್ಡ್ವೆಲ್ ಮತ್ತು ಫಕೀರನು ಇವುಗಳನ್ನು ನೋಡಿದರು. ಅವರೂ ಒಂದು ಮೂಲೆಯಲ್ಲಿ ಕುಳಿತುಕೊಂಡರು.

ಆಲ್ಡ್ವೆಲ್ ತನ್ನ ಪಕ್ಕದಲ್ಲಿ ಕುಳಿತುಕೊಂಡಿದ್ದ ಹೆಂಗಸನ್ನು ಕುರಿತು-"ನೀವೆಲ್ಲಿ ಸಿಕ್ಕಿಕೊಂಡಿರಿ ? ಇಲ್ಲಿಗೇಕೆ ನಿಮ್ಮನ್ನು ಕರದುಕೊಂಡು ಬರಲಾಯಿತು ? " ಎಂದು ಕೇಳಿದಳು.

ಆ ಹೆಂಗಸು-"ವಿಪ್ಲವಕಾರರು ದಂಡಿನ ಮನೆಗಳಿಗೆ ಬೆಂಕಿ ಹಚ್ಚಲಾರಂಭಿಸಿದರು. ಸಿಕ್ಕಿದವರನ್ನೆಲ್ಲಾ ಕಡಿದು ಹಾಕಲಾರಂಭಿಸಿದರು. ಆಗ ಕೆಲವು ಮಂದಿ ದರ್ಯಾಗಂಜ್‌ನ ರೆಸಿಡೆನ್ಸಿ ಹೌಸ್‌ನಲ್ಲಿ ಸೇರಿಕೊಂಡೆವು. ಗಂಡಸರು ಹೊರಗಡೆ ರಿವಾಲ್ವರುಗಳನ್ನೂ ಹಿಡಿದು ಕಾಯುತ್ತಾ ನಿಂತಿದ್ದರು. ಸ್ವಲ್ಪ ಹೊತ್ತಿನಲ್ಲಿ ಅಲ್ಲಿಗೂ ವಿಪ್ಲವಕಾರರು ಬಂದರು. ಬಂಗಲೆಗೆ ಬೆಂಕಿಯನ್ನು ಹಚ್ಚಿದರು. ಕಾಯುತ್ತಲಿದ್ದವರನ್ನು ಕತ್ತರಿಸಿ ಹಾಕಿದರು. ನಮ್ಮನ್ನೆಲ್ಲಾ ಎಳೆದು ಹೊರಗೆ ಹಾಕಿದರು. ಅನಂತರ ಇಲ್ಲಿಗೆ ತಂದು ಹಾಕಿದ್ದಾರೆ. ನಾಲ್ಕು ದಿನಗಳಿಂದ ಇಲ್ಲಿದ್ದೇವೆ. ಆ ಮನೆಯಲ್ಲಿಯೇ ನಾವು ಬೆಂದು ಹೋಗಿದ್ದರೆ ಚೆನ್ನಾಗಿತ್ತು " ಎಂದು ಹೇಳಿದಳು.

ಫಕೀರನು ಛದ್ಮವೇಷಧಾರಿಯಾದ ಡಾಕ್ಟರ್ ಬಾರ್ಟ್ಸ್ ಎಂದು ವಾಚಕರು ಊಹಿಸಿರುತ್ತಾರೆಂಬುದರಲ್ಲಿ ಸಂದೇಹವೇ ಇಲ್ಲ. ಬಾರ್ಟ್ಸ್ ಕೇಳಿದನು-"ಆಲ್ಡ್ವೆಲ್! ಇವರದಾಯಿತು. ನಿನ್ನ ವಿಷಯವೇನು? ಬ್ರಿಗೇಡಿಯರ್ ಗ್ರೇವ್ಸ್ ಏನಾದನು?"

ಆದಕ್ಕೆ ಆಲ್ಡ್ವೆಲ್ ಈರೀತಿಯಾಗಿ ಹೇಳಲು ತೊಡಗಿದಳು.

"ಬಾರ್ಟ್ಸ್, ನೀನು ಹೋದನಂತರ ಗ್ರೇವ್ಸ್ ಎಲ್ಲರನ್ನೂ ಒಂದು ಬಾರಕ್ ಬಳಿ ಕೂಡಿಸಿ ಯುದ್ಧಮಾಡಿದನು. ಆದರೆ ಅದು ವಿಫಲವಾಯಿತು. ಆ ಘೋರವಾದ ರಾತ್ರಿಯಲ್ಲಿ ಯುದ್ಧಮಾಡುತ್ತಿರುವಾಗಲೇ ಬಾರಕ್ಸ್‌ನ ಹಿಂದಿನ ದಾರಿಯಲ್ಲಿ ನಾವೆಲ್ಲರೂ ಓಡಿಹೋದೆವು. ಕಾಡು ದಾರಿಯನ್ನು ಹಿಡಿದೆವು. ಎಷ್ಟೋ ಬಗೆಯ ಕಷ್ಟಗಳನ್ನೆಲ್ಲಾ ಅನುಭವಿಸಿದೆವು. ಅದೆಲ್ಲಾ ದೊಡ್ಡ ಕಥೆ. ನಮ್ಮಲ್ಲಿ ಕೆಲವರು ಕರ್ನಾಲ್‌ನ ಮಿಲಿಟರಿ ಸ್ಟೇಷನ್ನಿಗೆ ಹೋದರು. ಮತ್ತೆ ಕೆಲವರು ಅಂಬಾಲಾ ಕಡೆಗೆ ಹೊರಟರು. ಉಳಿದ ನಾವು ಎಲ್ಲಾ ಮಿಲ್ಟ್ರಿ ಸ್ಟೇರ್ಷಗಳಲ್ಲಿಯೂ ಇದೇ ಕಥೆಯಾಗಿರುತ್ತದೆಂದು ಗ್ರಾಮಾಂತರ ಪ್ರದೇಶವನ್ನು ಹೊಕ್ಕೆವು. ದಾರಿಯಲ್ಲಿ ನಮಗೊಂದು ಹಳ್ಳಿಯು ಸಿಕ್ಕಿತು. ಆ ಹಳ್ಳಿಯ ಜನಗಳು ಬಹಳ ಒಳ್ಳೆಯವರು. ಅಲ್ಲಿ ಜಮ್ನಾದಾಸ್ ಎಂಬುವವನು ಒಬ್ಬ ಬ್ರಾಹ್ಮಣ. ದೊಡ್ಡ ಶ್ರೀಮಂತ. ನಮಗವನು ಆಶ್ರಯವನ್ನು ಕೊಟ್ಟನು. ಅಲ್ಲಿ ಎರಡು ದಿನಗಳ ಕಾಲ ವಿಶ್ರಾಂತಿಯನ್ನು ಪಡೆದೆವು. ನನ್ನೊಡನಿದ್ದವರು ಮುಂದೆ ಪ್ರಯಾಣ ಮಾಡಿದರು. ನಾನು ದೆಹಲಿಗೆ ಹಿಂತಿರುಗಿದೆನು.

ಆ ಮಾತುಗಳನ್ನು ಕೇಳಿ ಬಾರ್ಟ್ಸ್ "ಆಲ್ಡ್ವೆಲ್! ನೀನು ಪುನಃ ಹಿಂದಕ್ಕೇಕೆ ಬಂದೆ? ನಿನಗೆ ಇಲ್ಲಿ ಏನು ಕೆಲಸವಿತ್ತು.? ತಿಳಿದೂ ತಿಳಿದೂ ಭಾವಿಯಲ್ಲಿ ಬೀಳುವ ಮನಸ್ಸೇಕೆ ಮಾಡಿದೆ?" ಎಂದು ಕೇಳಿದನು."

"ಅದು ಬಹಳ ಗುಟ್ಟಿನ ವಿಷಯ. ಅದನ್ನೆಲ್ಲಾ ಹೇಳುವುದಿಲ್ಲ,"

"ಗುಟ್ಟಿನ ವಿಷಯವಾದರೆ ನನ್ನೊಂದಿಗೆ ಹೇಳಬಾರದೆ? ನಿನ್ನಲ್ಲಿ ಹೇಳಿದರೆ ಅನರ್ಥವಾಗುವುದೇ?"

"ಗ್ರೇವ್ಸ್ ನಿನ್ನೊಂದಿಗೆ ಗುಟ್ಟಿನ ವಿಷಯ ಹೇಳಿ ಕಳುಹಿಸಿ ಅವನಿಗೂ ನಿನಗೂ ಆಗಬಾರದ ಅನರ್ಥವಾಯಿತು. ಇನ್ನೂ ಒಂದು ಬಾರಿಹಾಗೆ ಆಗಬೇಕೇ? ಈಗಾಗಿರುವುದು ಸಾಲದೆ?" ಎಂದು ಹೇಳಿ ನಕ್ಕಳು.

ಅವರೊಡನೆ ಕುಳಿತು ಮಾತನಾಡುತ್ತಿದ್ದ ಹೆಂಗಸಿನ ಮಗುವು ಮಲಗಿ ನಿದ್ರೆ ಮಾಡುತ್ತಿದ್ದುದು ಎದ್ದು ಅಳಲಾರಂಭಿಸಿತು. ಆ ಹೆಂಗಸು ಮಗುವನ್ನು ಸುದಾರಿಸಲು ಎದ್ದು ಹೋದಳು.

ಬಾರ್ಟ್ಸ್ "ಬಂದೀಖಾನೆಗೆ ನಿಮ್ಮನ್ನು ಕರತರುವಾಗ ಗುಲಾಂ ನಿನ್ನೊಡನೆ ಮಾತನಾಡಿದನಲ್ಲ. ಅವನು ನಿನಗೆಲ್ಲಿ ಗುರುತು? ಅವನು ಈ ರಾತ್ರಿ ಬಂದು ನಿನ್ನನ್ನು ಬಿಡಿಸಿಕೊಂಡು ಹೋಗುವುದಾಗಿ ಹೇಳಿದ ನಲ್ಲ? ಅವನಿಗೆ ನಿನ್ನಲ್ಲಿ ಅಂತಹ ಕರುಣೆಗೆ ಕಾರಣವೇನು?" ಎಂದು ಕೇಳಿದನು.

ಆಲ್ಡ್‌ವೆಲ್ ಕಣ್ಣು ಹಾರಿಸಿ ನಕ್ಕು, ಅವನ ಕಿವಿ ಹಿಂಡುತ್ತಾ "ಹುಚ್ಚು ಫಕೀರನೇ? ಸುಮ್ಮನಿರು. ಅದನ್ನೆಲ್ಲಾ ಕೇಳಬಾರದು." ಹೇಳಿದಳು.

ಕೇಳಿದ ಪ್ರಶ್ನೆಗೆ ಸಮಾಧಾನ ಬಂದಿತೋ ಇಲ್ಲವೋ ಬಾರ್ಟ್ಸ್ ಸುಮ್ಮನೆ ಕುಳಿತುಕೊಂಡನು.

ರಾತ್ರಿ ಒಂದು ಗಂಟೆಯು ಸಮಯವಾಯಿತು. ಗುಲಾಂ ಮಹ ಮದ್ ಬಂದೀಖಾನೆಯ ಬಳಿ ಬಂದು ಪಹರೆಯವರನ್ನು ನೋಡಿ-"ನಾನು ಸಾಯಂಕಾಲ ಕರದುಕೊಂಡು ಬಂದು ಬಿಟ್ಟ ಬಂದಿಯನ್ನು ಕರದು ಕೊಂಡು ಹೋಗುತ್ತೇನೆ"-ಎಂದನು.

ಪಹರೆಯವರು ಬಾಗಿಲು ತೆರೆದರು.

ಅರ್ಧರಾತ್ರಿಯಾಗಿತ್ತು. ಆ ಬಂದೀಖಾನೆಯಲ್ಲಿ ಎಲ್ಲರೂ ಮಲಗಿ ನಿದ್ರಿಸುತ್ತಿದ್ದರು. ಆಲ್ಡ್‌ವೆಲ್ ಮಾತ್ರ ತೂಕಟಿಸುತ್ತಾ ಕುಳಿತುಕೊಂಡಿದ್ದಳು. ಗುಲಾಮನು ಬರುತ್ತಲೇ ಎದ್ದು ಬಾಗಿಲಿನ ಕಡೆಗೆ ಬಂದಳು.

ಗುಲಾಂ-"ಬೇಗ ಹೊರಡು. ಹೊತ್ತಾಗಿ ಫಜೀತಿಗಿಟ್ಟುಕೊಂಡರೆ ನಾನೂ ನಿನ್ನೊಡನೆ ಈ ಕತ್ತಲೆಯ ಕೋಣೆಯಲ್ಲಿ ಬಂದಿಯಾಗಿರಬೇಕಾಗುತ್ತದೆ," ಎಂದನು.

"ನಿನ್ನೊಡನೆ ಫಕೀರನೊಬ್ಬನಿದ್ದಾನೆ. ಅವನನ್ನೂ ಕರದುಕೊಂಡು ಹೋಗಬೇಕು."

"ಅದಾಗುವುದಿಲ್ಲ. ನಿನ್ನೊಬ್ಬಳನ್ನು ಬಿಡಿಸಿಕೊಂಡು ಹೋಗುವುದೇ ಎಷ್ಟೋ ಕಷ್ಟ."

" ನಾನು ಅವನಿಗೆ ಮಾತು ಕೊಟ್ಟಿದ್ದೇನೆ."

" ಅವನನ್ನು ನಾಳೇ ಬಿಡಿಸುತ್ತೇನೆ."

" ನಾನೂ ನಾಳೆಯೇ ಬರುತ್ತೇನೆ. ಅಲ್ಲಿಯವರೆಗೆ ನಾನೂ ಇಲ್ಲಿಯೇ ಇರುತ್ತೇನೆ."

" ಅಲ್ಲಾ ! ಸೂರ್ಯೋದಯದೊಳಗೆ ಈ ಜಾಗದಿಂದ ಹೊರಟು ಹೋದವರು ಬದುಕಿಕೊಂಡರು. ಅನಂತರ ಇಲ್ಲಿರುವವರನ್ನು ಕತ್ತರಿಸಿ ಹಾಕುತ್ತಾರೆ.

"ಅವನು ಬರದಿದ್ದರೆ ನಾನೂ ಬರುವುದಿಲ್ಲ. ನಾನೂ ನಾಳೆಯ ದಿನ ಇಲ್ಲಿಯೇ ಸಾಯುತ್ತೇನೆ.

ಗುಲಾಮನು ಕಣ್ಣು ಹಾರಿಸಿ ಗಟ್ಟಿಯಾಗಿ ಹೇಳಿದನು. " ನಿನ್ನೊಬ್ಬಳನ್ನೂ ಮಾತ್ರ ಕರತರಲು ಅಪ್ಪಣೆಯಾಗಿದೆ."

" ನಿನ್ನೊಡನೆ ಬಂದವನನ್ನು ಕರದುಕೊಂಡು ಹೋಗದಿದ್ದರೆ ನಾನೂ ಬರುವುದಿಲ್ಲ"

" ಬರದಿದ್ದರೆ ನಾನು ಬಲಾತ್ಕಾರದಿಂದ ಎಳೆದು ಕೊಂಡು ಹೋಗುತೇನೆ."

" ಜಮಾದಾರ್ ಸಾಬ್ ನೀವು ನನ್ನನ್ನು ಇಲ್ಲಿ ಕತ್ತರಿಸಿ ಹಾಕಬಲ್ಲಿರಿ. ಆದರೆ ಕರೆದು ಕೊಂಡು ಹೋಗಲಾರಿರಿ. ಹಾಗೆ ಬಲಾತ್ಕಾರದಿಂದ ನನ್ನ ದೇಹವನ್ನು ತೆಗೆದು ಕೊಂಡು ಹೊಗುವುದಾದರೆ ಅದರಲ್ಲಿಜೀವವಿರುವುದಿಲ್ಲ."

"ತೊತ್ತಿನ ಮಗಳೇ ಫರಂಗಿಯವಳಾದ ನಿನ್ನಲ್ಲಿ ಅಂತಹ ಧೃಢವಾದ ಮನಸ್ಸಿದೆಯೇ ? "

ಅನಂತರ "ಹಾಳಾಗಿಹೋಗಲಿ. ಅವನನ್ನೂ ಕರೆದು ಕೊಂಡು ಬಾ." ಎಂದನು.

ಆಲ್ಡ್ವೆಲ್ ಹೋಗಿ ಬಾರ್ಬ್ಸ್‌ನನ್ನು ಎಬ್ಬಿಸಿದಳು. ಅವನು ಮೇಲೆ ಎದ್ದನು. ನಿದ್ದೆಗಣ್ಣಿನಲ್ಲಿ ತಪ್ಪುಹೆಜ್ಜೆ ಹಾಕಿಕೊಂಡು ಬಾಗಿಲಿನ ಕಡೆಗೆ ಹೋಗುತ್ತಾ " ಎಲ್ಲಿಗೆ ? " ಎಂದನು.

ಅವಳು ಕೋಪದಿಂದ-ಸುಡುಗಾಡಿಗೆ. ಸುಮ್ಮನೆ ಬಾ. ಹುಚ್ಚು ಫಕೀರ ಎಂದಳು. ಅವನು ಮೌನವಾಗಿ ಅವಳನ್ನು ಹಿಂಬಾಲಿಸಿದನು.

ಗುಲಾಮನು ಆ ಬಂದಿಗಳಿಬ್ಬರನ್ನೂ ಕರಮಕೊಂಡು ಹೊರಗೆ ಬಂದು ಪಹರೆಯವರನ್ನು ಕುರಿತು "ಸಾಯಂಕಾಲ ಕರತಂದ ಇವರಿಬ್ಬರನ್ನೂ ಕರೆಮಕೊಂಡು ಹೋಗುತ್ತಿದ್ದೇನೆ. ಯಾರಾದರೂ ಬಂದು ಲೆಕ್ಕ ಕೇಳಿದರೆ ಜಮಾದಾರ್ ಗುಲಾಂ ಮಹಮದ್ ತನ್ನ ಬಂದಿಗಳನ್ನು ವಿಚಾರಣೆಮಾಡಲು ಕರದುಕೊಂಡು ಹೋಗಿದ್ದಾನೆಂದು ಹೇಳಿರಿ-ಎಂದನು.

ಬಂದಿಗಳಲ್ಲಿ ಸುಂದರಳಾದ ತರುಣಿಯೊಬ್ಬಳು ಇರುವುದನ್ನು ನೋಡಿ ಕಾವಲುಗಾರರಲ್ಲಿ ಒಬ್ಬನು ಇತರರ ಮುಖವನ್ನೂ ನೋಡಿದನು.

ಗುಲಾಂಮಹಮದ್ದನು ಬಂದಿಗಳೊಡನೆ ಮರೆಯಾದನಂತರ ಮತ್ತೊಬ್ಬನು-ಪರವಾಯಿಲ್ಲ. ಬಿಡು ಜೊತೆಯಲ್ಲಿ ಬೇರೊಬ್ಬನಿದ್ದಾನೆ. ಜಮಾದಾರ್ ಸಾಬ್ ಅವಳನ್ನು ಹಾರಿಸಲಾಗುವುದಿಲ್ಲ" ಎಂದನು.

ಮೊದಲನೆಯವನು ಪುನಃ "ಅವನೂ ಸಾಮಿಾಲಾಗಿದ್ದರೆ"-ಎಂದನು.

ಮಗದೊಬ್ಬನು-"ಸುಮ್ಮನಿರು. ಜಮಾದಾರರ ವಿಷಯದಲ್ಲಿ ಹೆಚ್ಚು ಕಡಮೆ ಮಾತನಾಡಿದರೆ ತಲೆಗೆ ಬಂದೀತು" ಎಂದನು.

ಗುಲಾಂ ಮಹಮದ್ ಬಂದಿಗಳನ್ನು ಅರಮನೆಯ ಹೊರಗೆ ಕರದುಕೊಂಡು ಬಂದನು. ಮೂವರೂ ಯಮುನಾತೀರಕ್ಕೆ ಬಂದರು. ಅಲ್ಲಿ ಗುಲಾಮನು ಬಾರ್ಟ್ಸನನ್ನು ಕುರಿತು "ನೀನು ಎಲ್ಲಿಯಾದರೂ ತಲೆ ಮರಸಿಕೊಂಡು ಓಡಿಹೋಗು. ಈ ನಗರದಲ್ಲಿದ್ದರೆ ತಲೆ ಕತ್ತರಿಸಿಹಾಕುತ್ತಾರೆ"-ಎಂದನು.

ಬಾರ್ಟ್ಸ ಹೋದನಂತರ ಆಲ್ಡ್ವೆಲ್ ಕೇಳಿದಳು-"ಗುಲಾಂ! ನಾಳೆಯದಿನ ಬೆಳಗಾದನಂತರ ಅವರನ್ನೆಲ್ಲಾ ಕಡಿದುಹಾಕುವುದಾಗಿ ಹೇಳಿದೆಯಲ್ಲಾ, ಹಾಗೆ ಕಡಿದುಹಾಕುವುದಾದರೆ ನಾಲ್ಕು ದಿನಗಳಿಂದ ಅವರನ್ನು ಬಂಧನದಲ್ಲಿಟ್ಟಿದ್ದುದು ಯಾಕೆ?"

"ಮೊದಲು ಅವರನ್ನು ಕೊಲ್ಲಬೇಕೆಂದಿರಲಿಲ್ಲ. ಅನಂತರ ಬೇಗಂ ಸಾಹೇಬರು ಬಂಧನದಲ್ಲಿರುವ ಹೆಂಗಸರುನ್ನ ಯಾರಾದರೂ ಕೆಡಿಸಿಬಿಟ್ಟರೆ-ನಾನಾಸಾಹೇಬರಿಗೆ ಕೋಪಬರುತ್ತದೆಂದೂ ಅದಕ್ಕೆ ಆಸ್ಪದವೇ ಇಲ್ಲದಂತೆ ಅವರನ್ನೆಲ್ಲಾ ಕಡಿದು ಹಾಕಬೇಕೆಂದು ಆಜ್ಞೆಮಾಡಿರುತ್ತಾರೆ"-

ಸ್ವಲ್ಪಹೊತ್ತು ಆವಿಲಾಸಿಗಳಿಬ್ಬರೂ ಯಮುನಾ ತೀರದಲ್ಲಿ ಕುಳಿತು ಮಾತನಾಡುತ್ತಿದ್ದರು.

ಅನಂತರ ಗುಲಾಂನು–"ಪ್ಯಾರೀ, ಏಳು, ಬೆಳಕು ಹರಿಯುವುದರೊಳಗಾಗಿ ಮನೆ ಸೇರಿಕೊಳ್ಳೋಣ" ಎಂದು ಅವಳನ್ನು ಕರೆದುಕೊಂಡು ಆ ಕತ್ತಲೆಯಲ್ಲಿ ನಗರಾಭಿಮುಖವಾಗಿ ಹೋದನು.

## ಫರಂಗಿಗಳ ಆಹ್ವಾನ

ಕಾ‍ನ್‌ಪುರದ ಕುಂಪಣಿ ಅಧಿಕಾರಿಗಳಿಗೆ ತಮ್ಮ ಭದ್ರತೆಯ ವಿಷಯದಲ್ಲಿ ಸಂಶಯವು ತಲೆದೋರಿದೊಡನೆಯೇ ನಾನಾರಾಯನ ಸಹಾಯವನ್ನು ಪಡೆಯುವುದು ಸೂಕ್ತವೆಂದು ಅವರು ಆಲೋಚಿಸಿದರು. ನಾನಾರಾಯನಿಗೆ ಹೇಳಿ ಕಳುಹಿಸಿದರು. ಅವನು ಕಾ‍ನ್‌ಪುರಕ್ಕೆ ಹೋಗಿ ಅವರನ್ನು ಭೇಟಿಮಾಡಿದನು.

ಯಥೋಚಿತವಾದ ಮಾತುಕಥೆಗಳಾದವು. ಅನಂತರ ಕಾ‍ನ್‌ಪುರದ ಕಲೆಕ್ಟರ್ ಹಿಲ್ಲರ್ಸ್ಡನ್–" ಪೇಶ್ವಾಜೀ, ಈಗ ನಿಮಗೆ ಒಳ್ಳೆಯದೊಂದು ಅವಕಾಶವು ಸಿಕ್ಕಿದೆ. ನೀವು ಪುನಃ ಪೇಷ್ಷನ್ ಪಡೆಯಬಹುದು" ಎಂದು ಹೇಳಿದನು.

ನಾನಾರಾಯನು ಕಲೆಕ್ಟರನ ಮುಖವನ್ನು ಒಂದುಬಾರಿ ನೋಡಿ ಬರುತ್ತಿದ್ದ ನಗುವನ್ನು ತಡೆದುಕೊಂಡು–" ಹೇಳಿರಿ, ನನ್ನಿಂದ ತಮಗೇನಾಗಬೇಕಾಗಿದೆ" ಎಂದು ಕೇಳಿದನು.

" ನೋಡಿರಿ! ನಮಗೆ ಮುಖ್ಯವಾದುದು ವ್ಯಾಪಾರ. ನಾವು ಇಲ್ಲಿಗೆ ಬಂದುದೂ ಅದಕ್ಕಾಗಿಯೇ! ಈ ರಾಜ್ಯಭಾರ–ಈ ದೌಲತ್‌ಗಳಿಂದ ನಮಗೆ ಏನೂ ಲಾಭವಿಲ್ಲ. ಇಲ್ಲಿನ ಜನಗಳ ಕ್ಷೇಮಕ್ಕಾಗಿ ಇಲ್ಲಿನ ರಾಜರುಗಳ ಸಹಾಯಕ್ಕಾಗಿ ನಾವು ರಾಜ ಕಾರಣದಲ್ಲಿ ಕೈಯಿಡ ಬೇಕಾಯಿತು."

" ನೀವು ಈ ವಿಷಯ ಯಾಕೆ ಹೇಳುತ್ತಿದ್ದೀರೆಂಬುದು ನನಗೆ ಅರ್ಥವಾಗಲಿಲ್ಲ. ರಾಜಕಾರಣದಲ್ಲಿ ನನಗೆ ಆಸಕ್ತಿಯೇ ಇಲ್ಲ"

" ಹಾಗುಂಟೇ ? ತಾವು ಪೇಶ್ವೆಗಳು ! ರಾಜರುಗಳೆಂದಾಗ ತಮ್ಮನ್ನೂ ಸೇರಿಸಿಕೊಂಡೇ ನಾನು ಹೇಳಿದುದು."

" ಲಂಡನ್ನಿನಲ್ಲಿ ಮಾಡಿದ ಪ್ರಯತ್ನವೂ ವಿಫಲವಾದನಂತರ ನನಗದರಲ್ಲಿ ಆಸಕ್ತಿಯೇ ಇಲ್ಲ. ಏನೋ ಇರುವುದರಲ್ಲಿಯೇ ತೃಪ್ತಿಯಿಂದಿದ್ದು ಬಿಡಬೇಕೆಂದು ಮನಸ್ಸು ಮಾಡಿಕೊಂಡಿದ್ದೇನೆ."

" ನೀವು ಆರೀತಿ ನಿರಾಶರಾಗ ಬೇಕಾಗಿಲ್ಲ. ಪುನಃ ಸ್ವಲ್ಪ ಪ್ರಯತ್ನ ಮಾಡಿದರೆ ನಿಮ್ಮ ಪೆನ್ಷನ್ ಪುನಃ ಸಿಕ್ಕುತ್ತದೆ. ಆ ವಿಷಯವನ್ನು ಹೇಳುವುದಕ್ಕಾಗಿಯೇ ನಾನು ನಿಮ್ಮನ್ನು ಕರೆಸಿದ್ದು. ನೀವು ಕಂಪನಿಯ ಶ್ರೇಯೋಭಿಲಾಷಿಗಳೆಂದು ತೋರಿಸಿದರೆ ಅನಾಯಾಸವಾಗಿ ನಿಮ್ಮ ಅಭೀಷ್ಟವು ನೆರವೇರುವುದು"

" ಹೇಳೋಣವಾಗಲಿ ! "

" ದೇಸೀಸೀಪಾಯಿಗಳಲ್ಲಿ ಅಲ್ಲಲ್ಲಿ ಸ್ವಲ್ಪ ಅಸಮಾಧಾನವು ತಲೆದೋರಿದಂತಿದೆ ! "

" ನಾನೂ ಕೇಳಿದೆ ! ಅದು ಈಗ ಹೇಗಿದೆ ? "

" ಮೀರತ್‌ನಲ್ಲಿ ಪೆರೇಡ್ ಆದಾಗ ಕೆಲವರು ಶಿಸ್ತಿನಿಂದ ನಡೆದುಕೊಳ್ಳಲಿಲ್ಲವೆಂದು ಅವರನ್ನು ಬಂಧಿಸಲಾಯಿತು. ಅದು ಸರಿಯಲ್ಲವೆಂದು ಸೀಪಾಯಿಗಳ ಅಭಿಪ್ರಾಯ "

" ಈಗ ಬಂದಿರುವ ತೋಟಾಗಳಲ್ಲಿ ಗೋವಿನ ಮತ್ತು ಹಂದಿಯ ಕೊಬ್ಬಿದೆ ಎಂದು ಸೀಪಾಯಿಗಳು ಮಾತನಾಡಿಕೊಳ್ಳುತ್ತಿದ್ದಾರೆಂದು ಕೇಳಿದ್ದೇನೆ."

" ನೋಡಿ ! ಹಾಗೆ ಯಾರೋ ಸೈನಿಕರಲ್ಲಿ ಪುಕಾರು ಎಬ್ಬಿಸಿದ್ದಾರೆ. ಅವರುಗಳಿಗೆ ದುರ್ಬೋಧನೆಗಳನ್ನು ಮಾಡಿದ್ದಾರೆ. ಅದೆಲ್ಲಾ ತಪ್ಪು ! ಮುಸಲ್ಮಾನ್ ಬಟ್ಲರುಗಳು ಹಂದಿಯನ್ನು ಬೇಯಿಸಿ ನಮ್ಮ ಊಟವನ್ನು ತಯಾರಿಸುವುದಿಲ್ಲವೇ ? "

" ನೀವು ಹೇಳುವುದು ಸರಿಯಾಗಿದೆ. ಆದರೂ ಸೀಪಾಯಿಗಳ ಆ ಸಂದೇಹವನ್ನು ಪರಿಹರಿಸಿ ಬಿಡುವುದು ಸೂಕ್ತವಲ್ಲವೇ ? "

" ಅದು ಸರಿ ! ಆದರೆ ಶಿಸ್ತಿಗೆ ವಿರೋಧವಾಗಿ ನಡೆಯಬಹುದೇ ? ಇದನ್ನೆಲ್ಲಾ ಗವರ್ನರ್ ಜನರಲ್ ಆಲೋಚಿಸುತ್ತಿದ್ದಾರೆ. ಆದರೆ

ಕಾನ್ಪುರದಲ್ಲಿ ಅಂತಹ ಪ್ರಸಂಗಗಳು ಆಗದಂತೆ ನೋಡಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯ! ಈ ಸಂದರ್ಭದಲ್ಲಿ ತಮ್ಮ ಸಹಾಯವು ಅಗತ್ಯ"

"ಅದಕ್ಕೇನು? ನನ್ನಿಂದೇನಾಗುತ್ತದೆಯೋ ಅದೆಲ್ಲವನ್ನೂ ಮಾಡಲು ಸಿದ್ಧನಾಗಿದ್ದೇನೆ."

"ನೋಡಿ! ಪೇಶ್ವೆಗಳೇ, ಇಲ್ಲಿರುವ ದೇಸೀಸಿಪಾಯಿಗಳಲ್ಲಿ ನಮಗೆ ಅಷ್ಟು ನಂಬಿಕೆಯಿಲ್ಲ. ಇವರು ಏನೇನೋ ಗೊಣಗುಟ್ಟುತ್ತಿದ್ದಾರೆಂದು ನಮ್ಮ ಗುಪ್ತಚಾರರು ವರ್ತಮಾನ ತಂದಿದ್ದಾರೆ. ಆದ್ದರಿಂದ ನವಾಬಗಂಜನಲ್ಲಿರುವ ದೇಸೀ ಸೈನ್ಯಗಳನ್ನು ತೆಗೆದು ಬಿಡಬೇಕೆಂದು ಯೋಚಿಸಿದ್ದೇವೆ. ನೀವು ನಿಮ್ಮ ಸೈನ್ಯಗಳನ್ನು ಅಲ್ಲಿ ತಂದಿರಿಸಬೇಕು. ಅಲ್ಲಿರುವ ನಮ್ಮ ಖಜಾನೆ ಮತ್ತು ಮದ್ದಿನ ಕೋಠಿಗಳ ರಕ್ಷಣೆಯನ್ನು ವಹಿಸಬೇಕು."

"ತಮಗೆ ಸಹಾಯವಾಗುವ ಹಾಗಿದ್ದರೆ ಅಗತ್ಯವಾಗಿ ಆಗಬಹುದು. ನನ್ನ ಸೈನ್ಯಕ್ಕೆ ಅದಕ್ಕಿಂತ ಮುಖ್ಯವಾದ ಕರ್ತವ್ಯವು ಇನ್ನೇನಿದೆ?"

ನಾನಾರಾಯನ ಮಾತುಗಳನ್ನು ಕೇಳಿ ಹಿಲ್ಲರ್ಸ್‌ಡರ್ನಗೆ ಬಹಳ ಸಂತೋಷವಾಯಿತು. ನಾನಾರಾಯನಿಗೆ ಅವನು ಧನ್ಯವಾದಗಳನ್ನು ಅರ್ಪಿಸಿದನು. ಅದೇ ದಿನ ನವಾಬಗಂಜಿಗೆ ಸೈನ್ಯವನ್ನು ತಂದು ಬಿಡಬೇಕೆಂದು ಒತ್ತಾಯ ಮಾಡಿದನು.

ಹಿಲ್ಲರ್ಸ್‌ಡರ್ನನ ಅಭಿಪ್ರಾಯದಂತೆ ಅದೇ ದಿನವೇ ನಾನಾರಾಯನ್ನು ಸೈನ್ಯಸಮೇತವಾಗಿ ನವಾಬಗಂಜಿಗೆ ಬಂದಿಳಿದನು. ಆ ಪ್ರದೇಶವನ್ನು ಆಕ್ರಮಿಸಿ ಅಲ್ಲಿದ್ದ ಕುಂಪಣಿಯ ಕಚೇರಿಗಳಿಗೂ, ಖಜಾನೆಗೂ ಮತ್ತು ಮದ್ದಿನ ಕೋಠಿಗೂ ತನ್ನ ಕಾವಲನ್ನು ಏರ್ಪಡಿಸಿದನು. ನಾನಾಸಾಹೇಬನ ಜೊತೆಯಲ್ಲಿ ತಾಂತ್ಯಾಟೋಪಿಯೂ ಅಜೀಮುಲ್ಲಾಖಾನನೂ ಬಂದಿದ್ದರು.

ನಾನಾರಾಯನೇ ಮುಂತಾದವರಿಗೆ ನವಾಬಗಂಜು ತನಗೆ ತಾನೇ ಕೈವಶವಾದುದರಿಂದಲೇ ತೃಪ್ತಿಯಾಗಲಿಲ್ಲ. ಮೀರತ್‌ನಲ್ಲಿ ಕ್ರಾಂತಿಯಾಗಿ ಎಂಟು ಹತ್ತು ದಿನಗಳಾಗಿದ್ದವು. ಆದರೆ ಕಾರ್ಣಪುರವು ಇನ್ನೂ ಶಾಂತವಾಗಿಯೇ ಇದ್ದಿತು. ಸೈನಿಕರಲ್ಲಿ ಅಸಮಾಧಾನವಿದ್ದರೂ, ಬೆಂಕಿಯು ಉರಿಯುವ ಮೊದಲಿರುವಂತೆ ಹೊಗೆಯಾಡುತ್ತಿದ್ದರೂ ಅದಿನ್ನೂ ಪ್ರತ್ಯಕ್ಷವಾಗಿ ಕಾಣಿಸಿಕೊಳ್ಳದಿದ್ದುದ್ದು ಅವರಿಗೆಲ್ಲಾ ಚಿಂತಾಜನಕವಾಗಿದ್ದಿತು.

ಕಾರ್ಣಪುರದಲ್ಲಿ ಕ್ರಾಂತಿಯ ಬೀಜವನ್ನು ಬಿತ್ತಿ ಮೂರು ತಿಂಗಳಾಗಿತ್ತು. ಹಿಂದೆ ನಾನಾರಾಯನೂ ಅಜೀಮುಲ್ಲಾಖಾನನೂ ಅದಕ್ಕೆ ಬೇಕಾದ ಏರ್ಪಾಡುಗಳೆಲ್ಲವನ್ನೂ ಮಾಡಿದ್ದರು. ಕ್ರಾಂತಿಯ ವಾತಾವರಣವು ದೇಶದಲ್ಲಿ ಬೆಳೆಯುತ್ತಾ ಬಂದಂತೆಲ್ಲಾ ಅವರು ಕಾರ್ಣಪುರದಲ್ಲಿ ಸೈನ್ಯದ ಸುಬೇದಾರರೊಡನೆ ಸಂಬಂಧವಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಈಗಂತೂ ಕ್ರಾಂತಿಯು ಯಾವ ಕ್ಷಣದಲ್ಲಿ ಎಂದರೆ ಆ ಕ್ಷಣದಲ್ಲಿ ಆರಂಭವಾಗಬಹುದಾಗಿತ್ತು. ಅದರ ಮೇಲೆ ನವಾಬಗಂಜಿನಲ್ಲಿ ಬಂದು ಬೀಡು ಬಿಟ್ಟಿದ್ದರು. ಹಾಗಿರುವಾಗ ಪ್ರತ್ಯಕ್ಷವಾಗಿ ದೇಸೀ ಸೈನ್ಯದ ಸುಬೇದಾರರೊಡನೆ ಸಂಬಂಧವಿಟ್ಟುಕೊಳ್ಳುವುದು ಸಾಧ್ಯವಿರಲಿಲ್ಲ. ಸಾಧಾರಣ ಜನರೊಂದಿಗೆ ಮಹತ್ತರವಾದ ರಹಸ್ಯ ಕಾರ್ಯದ ವಿಷಯವನ್ನು ಹೇಳಿಕಳಿಸುವುದು ಅಪಾಯಕರವಾಗಿದ್ದಿತು. ನಾನಾರಾಯನು ಹಿಂದೆ ಬಿತ್ತೂರಿನಿಂದ ಹೊರಗಡೆ ಹೊರಟಾಗಲೇ ಕಂಪನಿಯ ಅಧಿಕಾರಿಗಳು ಸಂದೇಹ ಪಟ್ಟಿದ್ದರು.

ಇಂತಹ ಸ್ಥಿತಿಯಲ್ಲಿ ದಂಡಿನ ಸುಬೇದಾರರನ್ನು ನೋಡುವುದು ಹೇಗೆ? ಅವರನ್ನು ಸಂಧಿಸುವುದು ಹೇಗೆ? ಕಾರ್ಣಪುರದಲ್ಲಿದ್ದ ಪರಂಗಿಯವರು ಸ್ವಯಂಶಕ್ತರಾಗಿದ್ದರು. ಇವರಿಗೆ ಸಹಾಯಕವಾಗಿ ಕಾಶಿಯಿಂದ ಫರಂಗಿಯವರ ಸೈನ್ಯವು ಬರುತ್ತಿತ್ತು. ಸೀಪಾಯಿಗಳ ವಿಷಯದಲ್ಲಿ ಸಂದೇಹವಿದ್ದುದರಿಂದ ಬಹಳ ಎಚ್ಚರಿಕೆಯಾಗಿದ್ದರು. ಕಾರ್ಣಪುರದಲ್ಲಿ ಸೈನ್ಯಾಧಿಕಾರಿಯಾಗಿದ್ದ ಜನರಲ್ ವೀಲರ್ ಮೊದಲಿನಿಂದಲೂ ಸೀಪಾಯಿಗಳ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಪರಂಗಿ ಅಧಿಕಾರಿಗಳು ಸರ್ವವಿಧವಾಗಿಯೂ

ವಿಪ್ಲವವು ಬರದಂತೆ ಮಾಡಲು ಪ್ರಯತ್ನಮಾಡುತ್ತಿದ್ದರು. ಸೀಪಾಯಿ ಗಳಿಗೆ ವಿಪ್ಲವ ಮನೋಭಾವವಿದ್ದರೂ ಅದರಲ್ಲಿ ಅವರು ಕೃತನಿಶ್ಚಯರಲ್ಲ ವೇನೋ ಎಂದು ನಾನಾರಾಯನಿಗೆ ಸಂದೇಹವಿದ್ದಿತು.

ಈದ್ ದಿನವು ಹತ್ತಿರ ಬರುತ್ತಿತ್ತು. ಹಬ್ಬಕ್ಕೆ ಎರಡು ಮೂರು ದಿನಗಳಿರುವಾಗ ಅಜೀಮುಲ್ಲಾಖಾನನು ಕಾನ್‌ಪುರದ ಪರಂಗೀ ಅಧಿಕಾರಿ ಗಳಿಗೆ ಒಂದು ಔತಣವನ್ನು ಕೊಟ್ಟನು. ಬ್ರಿಗೆಡಿಯರ್ ಜಾಕ್, ಪಾರ್ಕರ್ ವೀಲರ್, ಹಿಲ್ಲರ್ಸ್‌ಡನ್ ಮುಂತಾದ ಅಧಿಕಾರಿಗಳೂ, ಪರಂಗೀ ವ್ಯಾಪಾ ರಿಗಳೂ, ಅನೇಕಮಂದಿ ಐರೋಪ್ಯ ದೊಡ್ಡ ಮನುಷ್ಯರೂ ಮಹಿಳೆಯರೂ ಬಂದಿದ್ದರು. ಈ ಔತಣವು ಬಹಳ ವೈಭವವಾಗಿ ನಡೆಯಿತು.

ಕಾನ್‌ಪುರದ ಸ್ಥಿತಿಯನ್ನು ನೋಡಿಕೊಂಡು ಹೋಗಲು ಬಂದಿದ್ದ ಪ್ಲೇಚರ್ ಹೈಸ್‌ರೂ ಸಹ ಈ ಔತಣಕ್ಕೆ ಬಂದಿದ್ದರು. ಖಾನನು ಕೊಟ್ಟ ಔತಣದಿಂದ ಅವರು ಬಹಳ ಸಂತುಷ್ಟರಾಗಿ "ದೇಸೀ ಜನಗಳು ಕೊಟ್ಟ ಎಷ್ಟೋ ಔತಣಗಳನ್ನು ನಾನು ನೋಡಿದ್ದೇನೆ. ಎಂದೂ ನನಗೆ ಇಷ್ಟು ಖುಷಿಯಾಗಿರಲಿಲ್ಲ. ಇದು ಒಬ್ಬ ಐರೋಪ್ಯನೇ ಐರೋಪ್ಯರಿಗೆ ಕೊಟ್ಟ ಔತಣದಂತಿದೆ. ಖಾನರು ಸ್ವಯಂ ಐರೋಪ್ಯರಂತಿದ್ದಾರೆ. ಅದೇ ನಮ್ಮ ಹೋಸ್ಟ್‌ನಲ್ಲಿರುವ ವಿಶೇಷ" ಎಂದರು.

ಹಿಲ್ಲರ್ಸ್‌ಡನ್– ಸಂದೇಹವೇ ಇಲ್ಲ. ಖಾನರು ಯೂರೋಪಿನ ಲ್ಲೆಲ್ಲಾ ಸಂಚಾರಮಾಡಿದ್ದಾರೆ. ಎಷ್ಟೋ ದಿನಗಳು ಇವರು ಲಂಡನ್ನಿ ನಲ್ಲಿದ್ದರು. ನಡೆ ನುಡಿಯಲ್ಲಿ ಇವರು ಐರೋಪ್ಯರಂತೆಯೇ ಆಗಿದ್ದಾರೆ

ಫ್ಲೋರಾ ಎಂಬ ಮಹಿಳೆಯೊಬ್ಬಳು ನಗುತ್ತಾ–"ಖಾನಜೀ ಅರೇ ಬಿಯನ್ ನೈಟ್ಸ್‌ನ ಕಥಾನಾಯಕರಂತೆ ಎಂದು ಲಂಡನ್‌ನಲ್ಲಿ ಹೇಳುತ್ತಿದ್ದು ದನ್ನು ಕೇಳಿದ್ದೇನೆ"–ಎಂದಳು.

ಆ ಮಾತನ್ನು ಕೇಳಿ ಎಲ್ಲರೂ ನಕ್ಕರು.

ಅವರುಗಳು ಬಹಳ ಹೊತ್ತು ಲೋಕಾಭಿರಾಮವಾಗಿ ಮಾತನಾಡು ತ್ತಿದ್ದರು. ಔತಣವು ಸಮಾಪ್ತವಾಗುವಾಗ ಮಾತು ಬದಲಾಯಿಸಿತು.

ಹಿಲ್ಲರ್ಸ್‌ಡನ್ ಎದ್ದು ನಿಂತು-"ನಾನಾರಾಯರು ನಮ್ಮ ಸಹಾ ಯಕ್ಕೆ ಬಂದುದಕ್ಕಾಗಿ ಈ ಸಂತೋಷಕಾಲದಲ್ಲಿ ಅವರಿಗೆ ಧನ್ಯವಾದ ಗಳನ್ನು ಸಮರ್ಪಿಸಲಿಚ್ಛಿಸುತ್ತೇನೆ"–ಎಂದನು.

ಎಲ್ಲರೂ ಹಿಲ್ಲರ್ಸ್ಡರ್ನೊಡನೆ ಸಹಕರಿಸಿದರು. ನಾನಾರಾಯನು "ನಾನು ಮಾಡಿದುದೇನೂ ಮಹತ್ವವಾದುದಲ್ಲ. ಮಾನವ ಸಹಜವಾದ ಈ ಕಾರ್ಯ ನನ್ನ ಕರ್ತವ್ಯವೇ ಆಗಿತ್ತು"–ಎಂದು ಸೌಜನ್ಯದಿಂದ ನುಡಿದನು.

ವೀಲರ್ ಹೇಳಿದನು-"ಅದು ಹೇಗಿದ್ದರೂ ಈ ಸಮಯದಲ್ಲಿ ನೀವು ಕಂಪನಿಗೆ ಮಾಡುತ್ತಿರುವ ಸಹಾಯವು ಮಹತ್ತರವಾದುದು. ಈದ್ ದಿನವನ್ನು ಕಳೆದರೆ ದೊಡ್ಡದೊಂದು ಗಂಡವನ್ನು ದಾಟಿದಂತಾಗುತ್ತದೆ."

ನಾನಾರಾಯ–"ಹಾಗೆ ಹೇಳಬೇಡಿರಿ! ಮಹಮದೀಯರಿಗೆ ಆದಿನವು ಪವಿತ್ರವಾದ ದಿನ. ಆ ದಿನದಲ್ಲಿ ಅವರಾವ ಗಲಭೆಗಳನ್ನೂ ಮಾಡುವುದಿಲ್ಲ"

ವೀಲರ್– ಆದಿನವು ಪ್ರಮಾದ ಭರಿತವಾದುದೆಂದು ನಮಗೆ ವರ್ತಮಾನ ಬಂದಿದೆ.

ಅಜೀಮುಲ್ಲಾ- ನನಗೊಂದು ಆಲೋಚನೆಯು ಹೊಳೆಯುತ್ತದೆ. ಈದ್ ದಿನದಲ್ಲಿ ಹಿಂದೂ-ಮುಸಲ್ಮಾನರು ಪರಸ್ಪರ ಕುಶಲ ಪ್ರಶ್ನೆಯನ್ನು ಮಾಡುವುದು ಪದ್ಧತಿ. ಆ ಹಬ್ಬವನ್ನೇ ನೆಪಮಾಗಿಟ್ಟುಕೊಂಡು ಫರಂಗಿಯವರೂ ಸೀಪಾಯಿಗಳೊಡನೆ ಬೆರೆಯಬೇಕು. ನಾವೆಲ್ಲರೂ ಸೇರಿ ಈದ್ ದಿನವನ್ನು ಕಾನ್ಪುರದಲ್ಲಿ ಉಂಟಾಗಿರುವ ಭಯ ಸಂದೇಹಗಳನ್ನು ನಿವಾರಿಸುವ ಸಾಧನವಾಗಿ ಉಪಯೋಗಿಸೋಣ!

ಹೈಸ್– ಇದು ಒಳ್ಳೆಯ ಆಲೋಚನೆ.

ವೀಲರ್– ಇದು ಸರಿಯಾಗಿ ಸಾಧಿಸಲ್ಪಡುವುದಾದರೆ ನನಗೆ ಅದಕ್ಕಿಂತ ಸಂತೋಷಕರವಾದುದು ಬೇರೇ ಇಲ್ಲ.

ಖಾನನು–"ಸರ್ವಸಾಹಸದಿಂದಲೂ ನಾನು ಈ ಕೆಲಸವನ್ನು ಸಾಧಿಸುತ್ತೇನೆ" ಎಂದನು.

ಎಲ್ಲರೂ–"ಹಿಯರ್–ಹಿಯರ್" ಎಂದರು.

"ಹಾಗಾದರೆ ಅಸೇಬಿಯರ್ಸ್ ನೈಟ್ಸ್ ಹೀರೋ ಕೊಡುವ ಈದ್ ದಿನದ ಔತಣ ಬಹಳ ಜೋರಾಗಿರುತ್ತದೆ ಎಂದು ನಂಬುತ್ತೇನೆ. ಆದರೆ ನಮ್ಮ ಹೋಸ್ಟ್‌ನನ್ನು ಆ ದಿನ ಅರೇಬಿಯಾ ರಾಜನ ದಿರಸಿನಲ್ಲಿಯೇ ನೋಡಬೇಕೆಂದು ನನಗಾಸೆ"-ಎಂದು ಫ್ಲೋರಾ ಹೇಳಿದಳು.

ಔತಣವು ಮುಗಿದಾಗ ರಾತ್ರಿ ಒಂದು ಗಂಟೆಯಾಗಿತ್ತು.

## ವಿಲಾಸಿಗಳು

ಮೂರನೆಯ ದಿನದಿಂದಲೇ ಅಜುಮುಲ್ಲಾ ಖಾನನು-ದಂಡಿಗೆ ಹೋಗಿ ಬರಲಾರಂಭಿಸಿದನು. ಸುಬೇದಾರರನ್ನೂ ಸೈನಿಕರನ್ನೂ ಧಾರಾಳ ವಾಗಿ ಕಲೆತು ಬರುತ್ತಿದ್ದನು. ಅವರೊಂದಿಗೆ ಬೇಕಾದಷ್ಟು ಹೊತ್ತು ಕುಳಿತು ಮಾತನಾಡುತ್ತಿದ್ದನು. ಆಗಿನ ಕಾಲದಲ್ಲಿ ಕಾರ್ನಪುರದ ದಂಡಿನ ಲ್ಲಿಯೂ ಫರಂಗಿ ಅಧಿಕಾರಿಗಳಲ್ಲಿಯೂ ಖಾನನಿಗಿದ್ದ ಪ್ರಭಾವವು ಇನ್ನಾ ರಿಗೂ ಇರಲಿಲ್ಲ.

ಅಜಮುಲ್ಲಾ ಖಾನನ ಪ್ರಯತ್ನಗಳು ಸಫಲವಾಗದೇ ಹೋಗಲಿಲ್ಲ. ಈದ್ ದಿನದಲ್ಲಿ ಗಲಭೆಗಳುಂಟಾಗುವುವೆಂದು ಫರಂಗಿಯವರಿಗಿದ್ದ ಭಯ ಸಂದೇಹಗಳು ನಿವಾರಣೆಯಾದವು.

ಈದ್ ದಿನವು ಬಂದಿತು. ಆದಿನ ಸ್ವಲ್ಪವೂ ವಿದ್ವೇಷದ ಚಿನ್ಹೆಗಳು ಕಂಡುಬರಲಿಲ್ಲ. ಇತ್ತೀಚೆಗೆ ಕೆಲವು ದಿನಗಳಿಂದಲೂ ಇದ್ದ ಬಿಸಿಯಾದ ವಾತಾವರಣ ಆದಿನ ಇರಲಿಲ್ಲ.. ಎಷ್ಟೋ ದಿನಗಳಿಂದ ಇಲ್ಲದಿದ್ದ ಹರ್ಷವು ಕಾರ್ನಪುರದಲ್ಲಿ ಅಂದು ಕಂಡು ಬರುತ್ತಿದ್ದಿತು. ನವಾಬ್‌ಗಂಜಿನಲ್ಲಿದ್ದ ನಾನಾರಾಯನ ಸೈನಿಕರು ಕಾರ್ನಪುರದ ಕುಂಪಣೀ ಸೈನ್ಯದ ಸೀಪಾಯಿ ಗಳನ್ನು ಕಂಡು ಬಂದರು. ಅವರೂ ಇವರನ್ನು ಬಂದು ಕಂಡರು. ಪ್ರಮಾದ ಭರಿತವಾದುದೆಂದು ಫರಂಗೀ ಅಧಿಕಾರಿಗಳು ಸಂದೇಹಿಸುತ್ತಿದ್ದ ಈದ್ ದಿನವು ಕೇವಲ ಕುಶಲ ಪ್ರಶ್ನೆಗಳಲ್ಲಿಯೇ ಕೊನೆಗಂಡದು ಅವರಿಗೆ ಆಶ್ಚರ್ಯವನ್ನುಂಟುಮಾಡಿತು.

ಅದೇ ದಿನ ರಾತ್ರಿ ನವಾಬಗಂಜಿನಲ್ಲಿ ಫರಂಗಿಯವರಿಗೆ ಅಭೂತ ಪೂರ್ವವಾದ ಔತಣವೊಂದನ್ನು ಏರ್ಪಡಿಸಲಾಗಿತ್ತು. ಈ ಔತಣವನ್ನು ಏರ್ಪಡಿಸಿದ್ದವನೂ ಅಜಮುಲ್ಲಾ ಖಾನ! ಆದಿನ ಅಜಮುಲ್ಲಾ ಖಾನನು ವಿಚಿತ್ರವಾದುದೊಂದು ರೀತಿಯಲ್ಲಿ ಅಲಂಕರಿಸಿಕೊಂಡಿದ್ದನು. ತಲೆಗೆ ಉಷ್ಣೀಶವನ್ನು ಧರಿಸಿ ಮಂಡಿಗಳನ್ನು ಮುಟ್ಟುವಂತಹ ಉದ್ದವಾದ ಗಿಣಿ ಹಸರು ಬಣ್ಣದ ಅಂಗಿಯನ್ನು ಧರಿಸಿದ್ದನು. ಚಡಾವುಗಳನ್ನು ತೊಟ್ಟು ಪಾದಗಳು ಎದ್ದು ಕಂಡು ಬರುವಂತೆ ಪಾದಗಳ ಬಳಿ ಸಣ್ಣದಾಗಿ ದೊಗಳೆ

ಯಾಗಿರುವ ಮಾಸಲು ಬಿಳಿಯ ಬಣ್ಣದ ಷರಾಯಿ ಹಾಕಿಕೊಂಡಿದ್ದನು. ಉಷ್ಣೀಶವು ಅವನ ತಲೆಯ ಮೇಲೆ ಒಂದು ಕಿರೀಟದಂತೆ ಶೋಭಿಸುತ್ತಿತ್ತು. ಉಷ್ಣೀಶಕ್ಕೆ ಆಕಾಶ ಬಣ್ಣದ ರೇಷ್ಮೆಯ ಬಟ್ಟೆಯನ್ನು ಎಳೆದು ಕಟ್ಟಲಾಗಿತ್ತು. ಅವಕ್ಕೆ ಅಲ್ಲಲ್ಲಿ ಕಟ್ಟಿದ್ದ ವಜ್ರಗಳು ನಕ್ಷತ್ರಗಳಂತೆ ಮಿಣುಗುಟ್ಟುತ್ತಿದ್ದವು. ಹಣೆಯ ಬಲಪಕ್ಕದಲ್ಲಿ ಮೇಲೆ ಅದೇ ನೀಲಿಮಾ ವರ್ಣದ ಗರಿಗಳನ್ನು ಕಟ್ಟಿದ್ದು ಅದರ ಕೆಳಗೆ ದೊಡ್ಡದೊಂದು ನೀಲವು ಚಂದ್ರನಂತೆ ಪ್ರಕಾಶಿಸುತ್ತಿತ್ತು. ಅವನ ವಿಶಾಲವಾದ ವಕ್ಷಸ್ಥಲವನ್ನು ಮುಚ್ಚುತ್ತಿದ್ದ ಅಂಗಿಯ ಕೆಳಗಡೆ ಕೆಂಪು ರೇಷ್ಮೆಯ ನಡುಕಟ್ಟಿನಲ್ಲಿ ಜರಿಯ ಹೂಗಳು ಕಂಗೊಳಿಸುತ್ತಿದ್ದವು. ಅವನು ಹಾಕಿಕೊಂಡಿದ್ದ ದೊಗಳೆಯ ಷರಾಯಿಯು ಗಾಳಿಗೆ ಆಡುವಾಗ ಸಮುದ್ರದ ಅಲೆಗಳಂತೆ ತೆರೆತೆರೆಗಳಾಗಿ ಕಂಡು ಬರುತ್ತಿದ್ದಿತು.

ಅರೇಬಿಯನ್ ನೈಟ್ಸ್ ಕಥಾನಾಯಕನಂತಿರುವನೆಂದು ಆಗಿನ ಕಾಲದಲ್ಲಿ ಎಲ್ಲರೂ ಮೆಚ್ಚಿಕೊಂಡಿದ್ದ ಅವನಿಗೆ ಆ ಅಲಂಕಾರವು ಬಹಳ ಚೆನ್ನಾಗಿ ಒಪ್ಪುತ್ತಿದ್ದಿತು. ಕೆಂಪು ಮಿಶ್ರಿತವಾದ ಬಿಳಿಯ ಬಣ್ಣದಿಂದ ಕೂಡಿದ ವರ್ಣ. ತೇಜೋಪೂರ್ಣವಾಗಿದ್ದ ಮುಖ. ವಿಶಾಲವಾದ ಎತ್ತರ ವಾದಹಣೆ. ನೀಳವಾದ ಮೂಗು. . ತೆಳುವಾದ ಕೆಂದುಟಿಗಳು ಇವುಗಳನ್ನು ನೋಡಿದವರಾರೂ ಅವನು ಅರೇಬಿಯಾದ ರಾಜಕುಮಾರನೆಂದರೆ ಸಂದೇಹ ಪಡುತ್ತಿರಲಿಲ್ಲ.

ಗಲಭೆಗಳು ಆರಂಭವಾಗದೇ ಇದ್ದುದರಿಂದ ಮೊದಲೇ ಸಂತೋಷಗೊಂಡಿದ್ದ ಫರಂಗೀ ಅಧಿಕಾರಿಗಳಿಗೆ ಈ ಔತಣದಿಂದ ಬಹಳ ಪ್ರಿಯವಾಯಿತು. ರುಚಿ ರುಚಿಯಾದ ತಿಂಡಿಗಳಿಂದಲೂ, ಉತ್ತಮವಾದ ಮದ್ಯಗಳಿಂದಲೂ ಸುಪ್ರಸನ್ನರಾದ ಅತಿಥಿಗಳು ಸಂತೃಪ್ತರಾಗಿ ಹೊರಟು ಹೋದರು.

ಆದಿನ ಖಾನನು ಯಾಕೆ ಆರೀತಿ ಶೃಂಗರಿಸಿಕೊಂಡಿದ್ದನೆಂಬುದನ್ನು ವಾಚಕರು ಈಗಾಗಲೇ ಊಹಿಸಿದ್ದಾರೆಂಬುದರಲ್ಲಿ ಸಂದೇಹವೇ ಇಲ್ಲ. ಔತಣವು ಮುಗಿಯುವುದು ಸ್ವಲ್ಪ ಹೊತ್ತಿದೆ ಎನ್ನುವಾಗ ಖಾನನು ಖಾನನು ಫ್ಲೋರಾಳ ಬಳಿಯಲ್ಲಿ ಬಂದು ಕುಳಿತುಕೊಂಡಿದ್ದನು. ತನ್ನ ಮಾತಿನಂತೆ ಖಾನನು ನಡದು ಕೊಂಡುದು ಆ ಸುಂದರಿಗೊಂದು ಬಗೆ

ಯಾದ ಹೆಮ್ಮೆಯಾಗಿತ್ತು. ಔತಣವು ಮುಗಿದು ಎಲ್ಲರೂ ಹೊರಟು ಹೋದರೂ ಅವಳು ಖಾನನೊಂದಿಗೇ ಇದ್ದಳು.

ವಿಶಾಲವಾದ ಮೈದಾನದಲ್ಲಿ,ಪ್ರಕಾಶಮಾನವಾದ ಬೆಳದಿಂಗಳಿನಲ್ಲಿ, ಹುಲ್ಲಿನಮೇಲೆ ಹಾಸಿದ್ದ ರತ್ನಗಂಬಳಿಯಲ್ಲಿ, ಫ್ಲೋರಾಳೊಂದಿಗೆ ಕುಳಿತು ಖಾನನು ಆದಿನ ಚಂದ್ರದರ್ಶನಮಾಡಿದನು. ಔತಣ ಸಮಾರಂಭವು ಮುಗಿದನಂತರ ಖಾನನು ಪ್ರತ್ಯೇಕವಾಗಿ ಫ್ಲೋರಾಳನ್ನು ಆಹ್ವಾನಿಸಿದ್ದನು. ವಿಜೃಂಭಣೆಯಿಂದ ನಡೆದ ಆ ಔತಣಕ್ಕಿಂತಲೂ,ಕೇವಲ ಎರಡು ಸ್ವರ್ಣ ಪಾನ ಪಾತ್ರೆಗಳಿಂದಲೂ ಮದ್ಯಭರಿತ ಕುಂಭದಿಂದಲೂ, ಕೂಡಿದ್ದ ಆ ಪಾನ ವೈಖರಿಯು ಅವಳಿಗೆ ಬಹಳವಾಗಿ ಒಪ್ಪಿತು.

ಖಾನನು ಸುರಿಯುತ್ತಿದ್ದ ಮದ್ಯವನ್ನು ಮೇಲಿಂದ ಮೇಲೆ ಪಾನ ಮಾಡಿ ಫ್ಲೋರಾ–"ಖಾನನೇ! ಈ ಮಧ್ಯಪಾನವು ಬಹಳ ಸುಖಕರವಾಗಿದೆ. ಯೂರೋಪಿಯರ್ನರ ಕ್ಯಾಬರೆಟ್ ಡಾನ್ಸ್ ಸಹ ಇಷ್ಟು ಸಂತೋಷಪ್ರದವಲ್ಲ"–ಎಂದು ಹೇಳಿದಳು.

" ಈ ಸಣ್ಣ ಔತಣವು ನಿಮಗೆ ಇಷ್ಟು ಪ್ರಿಯವಾದುದಕ್ಕೆ ನಾನು ಹೆಮ್ಮೆಪಡುತ್ತೇನೆ"– ಎಂದು ಖಾನನುಹೇಳಿದನು.

"ಕಣ್ಣು ಚುಚ್ಚುವ ಬೆಳಕು. ಅತಿಯಾದ ಅಲಂಕಾರ, ಕುಡಿತದಿಂದ ಬುದ್ಧಿಯು ಕೆಟ್ಟು ಆಡುವ ಅಸ್ತವ್ಯಸ್ತವಾದ ಮಾತುಗಳು, ಕೂಗುಗಳು, ಬ್ಯಾಂಡ್ ಕೂಡಲೇ ಎದ್ದು ಡಾನ್ಸ್ ಮಾಡಬೇಕೆನ್ನುವ ನಿರ್ಬಂಧ, ಇದೆಲ್ಲದರಮೇಲೆ ಯೂರೋಪಿಯನ್ನರ ಪಾರ್ಟಿಗಳಲ್ಲಿ ಎಲ್ಲಿ ನೋಡಿದರೂ ಅದು ಕೃತ್ರಿಮವಾಗಿ ಕಂಡು ಬರುತ್ತದೆ. ಪ್ರಕೃತಿ ಸೌಂದರ್ಯ ಮಧ್ಯದಲ್ಲಿ ಆತ್ಮೀಯರಾದ ಮಿತ್ರರೊಡನೆ ಕುಳಿತು ಪಾನಮಾಡಬೇಕೆಂದು ನನಗೆ ಬಹಳ ದಿನಗಳಿಂದಲೂ ಆಸೆಯಿದ್ದಿತು."

" ಫ್ಲೋರಾ! ನಿನಗೆ ಪ್ರಿಯವಾದ ಈ ಪಾನ ಗೋಷ್ಠಿಯು ನನಗೂ ಬಹಳ ಸಂತೋಷಪ್ರದವಾಗಿದೆ. ಅನರ್ಘ್ಯವಾದ ವಸ್ತ್ರಾಭರಣಗಳನ್ನು ಧರಿಸಿ ಕೃತ್ರಿಮವಾದ ಅಟ್ಟಹಾಸದಿಂದ ಮೆರೆಯುವ ಮನಸ್ಸು ನಿನಗಿಲ್ಲ. ಆಹ್ಲಾದಕರವಾದ ಪ್ರಾತಃಕಾಲದಲ್ಲಿ, ಎಳಬಿಸಲಿನ ಬೆಳಕಿನಲ್ಲಿ,ಸಹಜವಾದ

ಹಕ್ಕಿಯಂತೆ ಹಾರುವ ಆಶೆ ನಿನಗೆ. ಅದನ್ನು ಮತ್ತೊಬ್ಬರು ನೋಡಲೆಂಬ ಆಶೆಯು ನಿನಗಿಲ್ಲ. ನೋಡಲಿಲ್ಲವಲ್ಲಾ ಎಂಬ ಪರಿತಾಪವೂ ಇಲ್ಲ. ಅಂತಹ ವೇದಾಂತಿನಿಯಾದ ರಸಿಕಳು, ನೀನು ! " ಎಂದನು.

ಆ ಮಾತು ಕೇಳಿ ಫ್ಲೋರಾಗೆ ಬಹಳ ಸಂತೋಷವಾಯಿತು. ಆ ಸ್ತೋತ್ರದಿಂದ ಅವಳ ಎದೆಯು ಉಬ್ಬಿದಂತಾಯಿತು. ಸಂಗೀತದಂತೆ ಪ್ರಿಯವಾಗಿದ್ದ ಆ ಮಾತುಗಳಿಂದ ಅವಳಿಗೆ ರೋಮಾಂಚವಾಯಿತು, ಮಧುಪಾತ್ರೆಯನ್ನು ಎತ್ತಿದ ಅವಳು, ಅವನ ಕಡೆಗೆ ವಾರೆನೋಟದಿಂದ ನೋಡಿ, ತುಟಿಗಳಿಂದ ಮದ್ಯದ ಬಿಂದುಗಳು ತೊಟ್ಟಿಕ್ಕುತ್ತಿರಲು "ಖಾನನೇ ! ನನ್ನ ಮನೋಧರ್ಮವನ್ನು ತಿಳಿದವನು ಈ ಪ್ರಪಂಚದಲ್ಲಿ ನೀನೊಬ್ಬನೇ ! " ಎಂದು ಹೇಳಿದಳು.

ಖಾನನು ಅವಳ ಕಡೆಗೆ ನೋಡಿದನು. ಅನರ್ಘ್ಯವಾದ ಪರಿಷಿಯಾ ದೇಶದ ರತ್ನ ಕಂಬಳಿಯ ಮೇಲೆ,ಆ ಶುಭ್ರ ಜ್ಯೋತ್ಸ್ನೆದಲ್ಲಿ,ಮದ್ಯ ಕುಂಭದ ಮಿಣುಗುಟ್ಟುವ ವಜ್ರಗಳ ಪ್ರಕಾಶದಲ್ಲಿ ಕುಳಿತಿದ್ದಾ ಸುಂದರಿಯನ್ನು ಖಾನನು ನೋಡಿದನು. ವರ್ತುಲಾಕಾರವಾಗಿ ಹರಡಿಕೊಂಡಿದ್ದ ಅರುಣ ವರ್ಣದ ಲಂಗದ ಮಧ್ಯದಲ್ಲಿ ಅವಳು ಕುಳಿತಿದ್ದಳು. ಅವಳ ತೆಳುವಾದ ಶರೀರವು ಬಳಕುತ್ತಿತ್ತು. ಅವಳ ಕಣ್ಣುಗಳು ಆ ಮದಿರಾ ಪ್ರವಾಹದಲ್ಲಿ ತೇಲುತ್ತಿದ್ದವು. ಪಾನ ಪಾತ್ರೆಯನ್ನು ಹಿಡಿದಿದ್ದ ಅವಳ ಹಸ್ತವು ನಡು ಗುತ್ತಿತ್ತು. ಅವಳನ್ನು ನೋಡಿದ ಖಾನನಿಗೆ ವಿಶಾಲವಾದ ಪಾರಿಜಾತ ಪುಷ್ಪದ ಮೇಲೆ ಸ್ವರ್ಗದ ಅಪ್ಸರೆಯು ಕುಳಿತು ತನ್ನನ್ನು ಕರೆಯುತ್ತಿರು ವಂತೆ ಭಾಸವಾಯಿತು. ಮಧುರವಾದ ಮದ್ಯದಿಂದ ನೆನೆದಿದ್ದ ಅವಳ ತುಟಿಗಳನ್ನು ಅವನು ಚುಂಬಿಸಿದನು.

ಪಹರೆಯವರು ಎರಡು ಗಂಟೆ ಹೊಡೆದಾಗ ಅವರಿಬ್ಬರೂ ಎಚ್ಚರ ಗೊಂಡರು. ಫ್ಲೋರಾಳನ್ನು ಕಾನ್ಪುರದ ದಂಡಿಗೆ ಕರದೊಯ್ಯು ಬಿಡಲು ಕೋಚುಗಾಡಿಯೊಂದು ಬಂದಿತು. ಗಾಡಿಯ ಬಳಿಗೆ ಹೋಗಲು ಅವರಿ ಬ್ಬರೂ ಎದ್ದು ನಿಂತರು. ಮದ್ಯಪಾನದಿಂದ ತೂಗುತ್ತಿದ್ದ ಆ ಸುಂದರಿಯು ಖಾನನ ಹೆಗಲು ಮೇಲೆ ಕೈ ಹಾಕಿ ಹಿಡಿದುಕೊಂಡಳು. ಮುಂದೆ ಹೆಜ್ಜೆ ಯಿಡುವ ಮೊದಲು-"ಪ್ರಿಯಾ! ನೀನು ಈದಿನ ನನ್ನ ಮತ್ತೊಂದು ಆಸೆಯನ್ನು ನೆರವೇರಿಸಬೇಕು" ಎಂದಳು.

"ಅದೇನು? ಫ್ಲೋರಾ! ನೀನು ಹೇಳಿದುದಕ್ಕೆ ನಾನು ಇಲ್ಲ ವೆನ್ನುವೆನೇ?"

"ಕೋಚ್ ಗಾಡಿಯನ್ನು ಕಳಿಸಿಬಿಡು! ಒಂದು ಡಾ ಗಾಡಿಯನ್ನು ತರಿಸು. ನೀನೇ ಗಾಡಿಯನ್ನು ನಡೆಸು. ಈ ಸುಖವಾದ ಬೆಳದಿಂಗಳಿನಲ್ಲಿ ನಾನು ನಿನ್ನ ಪಕ್ಕದಲ್ಲಿ ಕುಳಿತುಕೊಂಡು ಹೋಗಬೇಕೆಂದು ನನ್ನ ಆಪೇಕ್ಷೆ!"

ಫ್ಲೋರಾಳ ಆಪೇಕ್ಷೆಯಂತೆ ಮತ್ತೊಂದು ಗಾಡಿಯು ಬಂದಿತು. ಖಾನನೂ ಫ್ಲೋರಾಳೂ ಅದರಲ್ಲಿ ಕುಳಿತುಕೊಂಡರು. ಖಾನನೇ ಕುದುರೆ ಗಳ ಲಗಾಮು ಹಿಡಿದುಕೊಂಡು ಚಾಟಿಯನ್ನು ಚಮಕಾಯಿಸಲು ಕುದು ರೆಯು ನಾಗಾಲೋಟದಿಂದ ಓಡಲಾರಂಭಿಸಿತು.

ಆ ಅರ್ಧರಾತ್ರಿಯಲ್ಲಿ ಕಾರ್ಣಪುರವು ಮಲಗಿ ನಿದ್ರಿಸುತ್ತಿತ್ತು. ಕುದು ರೆಯ ಖರಪುಟ ಧ್ವನಿಯೊಂದನ್ನು ಬಿಟ್ಟರೆ ಗಂಭೀರವಾದ ನಿಶ್ಯಬ್ದವು ತಾನೇತಾನಾಗಿತ್ತು. ಪೂರ್ಣಚಂದ್ರನ ಪ್ರಕಾಶದಲ್ಲಿ ಬೀಸುವ ಬಲವಾದ ಗಾಳಿಯನ್ನೆದುರಿಸಿ ಹೋಗುವ ವಿಮಾನದಲ್ಲಿ ಆ ವಿಲಾಸಿಗಳಿಬ್ಬರೂ ತೇಲಿ ಹೋಗುತ್ತಿದ್ದರು.

ಗಾಡಿಯು ದೇಸೀಸಿಪಾಯಿಗಳ ಶಿಬಿರವನ್ನು ಹಾದು ವೇಗವಾಗಿ ಹೋಗುತ್ತಿರಲು, ಫ್ಲೋರಾ ಕೇಳಿದಳು-"ಖಾನನೇ! ಇಷ್ಟು ಶಾಂತವಾಗಿ ರುವ ಕಾರ್ಣಪುರವನ್ನು ಜ್ವಾಲಾಮುಖಿಯ ಗರ್ಭವೆಂದು ಸಂದೇಹಪಡು ವುದು ಕುಂಪಣಿಯ ಅಧಿಕಾರಿಗಳ ಮೌಢ್ಯವಲ್ಲವೇ?"

"ಸಂದೇಹವೇನು? ನಾನು ಹಿಂದಿನ ಔತಣದಲ್ಲಿ ಅವರು ಹೆದರು ವುದು ಅಪ್ರಕೃತವೆಂದು ಹೇಳಲಿಲ್ಲವೇ?"

"ನೀನು ಕೇವಲ ಹೇಳಿದ್ದೇ ಅಲ್ಲ. ಅವರ ಅವಿವೇಕವನ್ನು ಸಾಬೀತು ಮಾಡಿ ತೋರಿಸಿದ್ದೀಯೇ?"

"ಅದೆಲ್ಲಾ ಸರಿ! ಫ್ಲೋರಾ! ಈಗ ಸನಗೆ ಹೇಳಲಾಗದಂತಹ ಒಂದು ಸಂಧಿಗ್ಧಾವಸ್ಥೆಯು ಬಂದಿದೆ"

"ಅದೇನು, ನನಗೆ ಹೇಳಲಾಗದಂತಹುದೆ?"

"ನೀನು ಹಾಗೆ ಹೇಳುವುದು ಸರಿಯಲ್ಲ. ನಿನ್ನ ಬಳಿ ಮುಚ್ಚಿಡುವ ವಿಷಯವಾವುದೂ ಇಲ್ಲ. ಈದ್ ದಿನ ಗಲಭೆಗಳಾಗುವುದೆಂದಿದ್ದರಷ್ಟೆ!

ಅದು ಆಗಲಿಲ್ಲ. ಆಗುವ ಸಂಭವವೂ ಇಲ್ಲ. ಆದರೆ ಈ ಹುಚ್ಚು ಜನ ಗಳು ಇನ್ನೂ ಆ ಸಂದೇಹವನ್ನು ಬಿಟ್ಟಿಲ್ಲ. ಆಗ್ರಾದೊಂದಿಗೆ ಪತ್ರವ್ಯವ ಹಾರಗಳನ್ನು ಮಾಡುತ್ತಿದ್ದಾರೆ. ಕಾಶಿಯಿಂದ ಫರಂಗೀ ಸೈನ್ಯವನ್ನು ತರಿಸಲು ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಇದರಿಂದ ಸೀಪಾಯಿಗಳ ಮನಸ್ಸು ಕೆಡುತ್ತದೆ. ತಾವು ಸಭ್ಯರಾಗಿದ್ದರೂ ಸಂದೇಹಗ್ರಸ್ತರಾದ ಈ ಅಧಿಕಾರಿಗಳು ತಮಗೆ ಶಿಕ್ಷೆ ಮಾಡಬಹುದೆಂದು ಸೀಪಾಯಿಗಳು ಹೆದ ರುತ್ತಾರೆ. ಇದನ್ನೇ ಕಾರಣವಾಗಿ ಮಾಡಿಕೊಂಡು ಕ್ರಾಂತಿಯ ಏಜಂ ಟರುಗಳು ಪಿತೂರಿ ಮಾಡುತ್ತಾರೆ. ಈ ಅಧಿಕಾರಿಗಳ ನಡವಳಿಕೆಯೇ ವಿಪ್ಲವಕ್ಕೆಲ್ಲಿ ಪ್ರೇರಕವಾಗುವುದೋ ಎಂದು ನಾನು ಹಗಲೂ ರಾತ್ರಿಯೂ ಕೊರಗುತ್ತಿದ್ದೇನೆ"

"ಇದಕ್ಕಾಗಿ ನೀನು ಪರಿತಾಪ ಪಡಬೇಡ. ಮೇಜರ್ ವೀಲರ್ ನನ್ನು ನಾನು ಬಲ್ಲೆ. ಚೆನ್ನಾಗಿ ಬಲ್ಲೆ. ನಾನು ಅವನಿಗೆ ಹೇಳುತ್ತೇನೆ ಅವರಿಗೆ ಭಯ ಪಡಬೇಡಿರಿ-ಎಂದು ಹೇಳುತ್ತೇನೆ. ಕಾಶಿಯ ಸೈನ್ಯವು ಬರದಂತೆ ಅವರು ಹೆದರಿ ದುಡುಕನಂತೆ ಮಾಡುತ್ತೇನೆ"

ಆ ಮಾತುಗಳನ್ನು ಕೇಳಿ ಖಾನನು ಸಂತುಷ್ಟನಾಗಿ "ಫ್ಲೋರಾ! ನೀನು ಸ್ವರ್ಗದೇವತೆ"-ಎಂದು ಹೇಳಿದನು.

## ಈದ್ ದಿನಾನಂತರ

ಈದ್ ದಿನವು ಕಳೆದುದರಿಂದ ಫರಂಗೀ ಅಧಿಕಾರಿಗಳಿಗೆ ತಲೆಯ ಮೇಲಿದ್ದ ದೊಡ್ಡ ಕಲ್ಲು ಕೆಳಗಿಳಿದಂತಾಯಿತು. ಅದಕ್ಕೆ ಎರಡು ಮೂರು ದಿನಗಳ ಮೊದಲಿನಿಂದಲೂ ಯಾರಿಗೂ ನಿದ್ರೆಯೇ ಇರಲಿಲ್ಲ. ಅಹೋರಾ ತ್ರಿಗಳೂ ಅವರು ಎಚ್ಚರವಾಗಿದ್ದು ಬರುವ ವರ್ತಮಾನಗಳಿಗಾಗಿ ಕಾಯು ತ್ತಿದ್ದರು. ಭಯಂಕರವಾದ ಘಟನೆಗಳಾಗುವುವೆಂದೂ ಅದರ ಸಂಬಂಧ ವಾದ ಪಿತೂರಿಗಳು ನಡೆಯುತ್ತಿವೆ ಎಂದೂ ಅವರಿಗೆ ವರದಿಯಾಗುತ್ತಿತ್ತು. ಆ ವರದಿಗಳು ಒಂದಕ್ಕಿಂತ ಮತ್ತೊಂದು ಭೀಕರವಾಗಿರುತ್ತಿದ್ದವು. ಆದರೆ

ಈದ್ ದಿನವಾದನಂತರ ಅವರ ಭಯ ಸಂದೇಹಗಳು ಮಂಜಿನಂತೆ ಕರಗಿ ಹೋದವು.

ಕತ್ತಲೆಯಲ್ಲಿ ಮರವನ್ನು ಕಂಡು ಭೂತವೆಂದು ಹೆದರಿದಂತಾಯಿತಲ್ಲ ಎಂದವರು ಪರಸ್ಪರ ಪರಿಹಾಸ್ಯಮಾಡಿಕೊಂಡರು. ಫ್ಲೀಚರ್ ಹೈಸ್‌ರಂತೂ "ನೀವು ಬಹಳ ಹೆದರಿದ್ದೀರಿ. ಇದು ತಪ್ಪು. ಫರಂಗಿಗಳು ಬಹಳ ಸಣ್ಣ ವಿಷಯಗಳಿಗೆಲ್ಲಾ ಅಂಜುತ್ತಾರೆಂದು ದೇಶೀಯರು ತಮಾಷೆ ಮಾಡುವಂತಾಯಿತು" ಎಂದು ಹೇಳಿದ್ದರು.

ದೇಸೀಸೀಪಾಯಿಗಳು ದಂಗೆ ಏಳುವರೆಂದು ಊಹೆಮಾಡಿದ್ದ ಫರಂಗಿಯವರು ದಂಡಿನ ಒಂದು ಪಕ್ಕದ ಬ್ಯಾರಕ್ಸ್‌ಗಳಲ್ಲಿ ಒಟ್ಟಾಗಿ ವಾಸ ಮಾಡುತ್ತಿದ್ದರು. ಅಧಿಕಾರಿಗಳೂ, ವ್ಯಾಪಾರಿಗಳೂ, ಇತರ ವೃತ್ತಿಗಳಿಂದ ಬದುಕುತ್ತಿದ್ದವರೂ ಇಲ್ಲಿಯೇ ಬಂದು ಸೇರಿಕೊಂಡಿದ್ದರು. ಅವರ ಹೆಂಗಸರು ಮಕ್ಕಳು ಸಹ ಇಲ್ಲಿಯೇ ಇದ್ದರು. ಆ ಸ್ಥಳದ ಸುತ್ತಲೂ ಒಂದು ಮಣ್ಣಿನ ಗೋಡೆಯನ್ನು ಹಾಕುತ್ತಿದ್ದರು.

ಈದ್ ದಿನಾನಂತರ ಮೇಜರ್ ವೀಲರ್ ಸಾಹೇಬನು ಇದನ್ನು ನಿಲ್ಲಿಸಿದನು. ಕಾನ್‌ಪುರಕ್ಕೆ ಯಾವ ಭಯವೂ ಇಲ್ಲವೆಂದೂ ಅದು ಶಾಂತವಾಗಿರುವುದೆಂದೂ, ಅಲ್ಲಿನ ಸೀಪಾಯಿಗಳು ಸ್ವಾಮಿ ಭಕ್ತರಾಗಿರುವರೆಂದೂ ಬರೆದನು. ಕಾಶಿಯಿಂದ ಬರುತ್ತಿದ್ದ ಫರಂಗೀ ಬಲಗಳು ಕಾನ್‌ಪುರಕ್ಕೆ ಬೇಕಾಗಿಲ್ಲವೆಂದೂ ಅವುಗಳನ್ನು ಲಕ್ನೋಗೆ ಕಳಿಸಬಹುದೆಂದೂ ಬರೆದನು. ಈ ರೀತಿ ಅವನು ಆಗ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಕ್ಯಾನಿಂಗ್‌ನಿಂದ ದಕ್ಷನಾದ ಅಧಿಕಾರಿ ಎಂದೆನಿಸಿಕೊಂಡನು.

ಆದರೆ ಫರಂಗೀ ಅಧಿಕಾರಿಗಳು ನೆನೆದಂತೆ ಕಾನ್‌ಪುರದ ಪ್ರಮಾದವು ಕಳೆದಿರಲಿಲ್ಲ. ಈದ್ ಆಗಿ ಒಂದು ವಾರವಾಯಿತು. ಒಂದು ದಿನ ರಾತ್ರಿ ಹಠಾತ್ತನೆ ವಿಪ್ಲವವು ಆರಂಭವಾಯಿತು ಎರಡನೆಯ ಕುದುರೆದಳಗಳವರು ಯಾರೋ ಯೂರೋಪಿಯನ್ ಬ್ಯಾರಕ್ಸ್‌ನ ಕಡೆಗೆ ಗುಂಡುಗಳನ್ನು ಹಾರಿಸಲು ಆರಂಭಿಸಿದರು. ಇದ್ದಕ್ಕಿದ್ದಂತಯೇ ಕಾಳರಾತ್ರಿಯಲ್ಲಿ ಉಲ್ಕಾಪಾತಗಳಂತೆ ಗುಂಡುಗಳು ಹಾರುತ್ತಿರುವುದನ್ನು ನೋಡಿ ಫರಂಗಿಗಳು ನಡುಗಿದರು. ಅಲ್ಲಲ್ಲಿ ಹೊರಗಡೆ ಇದ್ದವರು. ಅರ್ಧಕಟ್ಟಿದ ಮಣ್ಣಿನ ರಕ್ಷಣಾಶ್ರೇಣಿಯೊಳಗೆ ಬಂದು ಸೇರಿಕೊಂಡರು.

ಆ ಸೈನ್ಯವು ಫರಂಗಿಯವರ ರಕ್ಷಣಾಶ್ರೇಣಿಯ ಕಡೆಗೆ ಹೊಗಲಿಲ್ಲ; ಪೂರ್ವ ದಿಕ್ಕಿನಲ್ಲಿದ್ಧ ನವಾಬಗಂಜಿನ ಕಡೆಗೆ ಹೋಯಿತು. ಹೀಗೆ ಹೊರಟ ಎರಡನೆಯ ಸೈನ್ಯವನ್ನು ಮೊದಲನೆಯ ಸೈನ್ಯವೂ ಅನುಸರಿಸಿತು.

ನವಾಬಗಂಜಿಗೆ ಬಂದ ಈ ವಿಪ್ಲವಕಾರರನ್ನು ನಾನಾರಾಯನ ಸೈನಿಕರು ತಡೆಯಲಿಲ್ಲ. ವಿಪ್ಲವಕಾರರು ಪ್ರವೇಶ ಮಾಡಿದರು. ಜೈಲಿನ ಬಾಗಿಲುಗಳನ್ನು ತೆರೆದು ಎಲ್ಲರನ್ನೂ ಬಿಡುಗಡೆ ಮಾಡಿದರು. ಸರ್ಕಾರೀ ಕಚೇರಿಗಳನ್ನು ಒಡೆದು ಅವುಗಳಿಗೆಬೆಂಕಿ ಹಚ್ಚಿದರು. ಖಜಾನೆ ಮತ್ತು ಮದ್ದಿನ ಕೋಠಿಗಳನ್ನು ಆಕ್ರಮಿಸಿದರು.

ಇಷ್ಟು ಹೊತ್ತಿಗೆ ರಾತ್ರಿ ಸುಮಾರು ಮೂರು ಗಂಟೆಗಳಾಗಿದ್ದವು. ಪದಾತಿ ಸೈನ್ಯದವರು ಇನ್ನೂ ಬಂದು ಸೇರಿರಲಿಲ್ಲ. ವಿಪ್ಲವಕಾರರಲ್ಲಿ ಯಾರಿಗೂ ಪದಾತಿ ಸೈನ್ಯದವರ ಈ ವಿಚಿತ್ರ ವರ್ತನೆಯ ವಿಷಯದಲ್ಲಿ ಏನು ಮಾಡಬೇಕೆಂದು ಗೊತ್ತಾಗಲಿಲ್ಲ. ಅದೊಂದು ಆಶ್ಚರ್ಯವಾಗಿದ್ದಿತು. ಅವರಿಗಾಗಿ ವಿಪ್ಲವವು ಇನ್ನೆರಡು ದಿನ ತಡವಾಗಿದ್ದರೂ ಚೆನಾಗಿತ್ತೆಂದು ಮಾತನಾಡಿದರು. ಅವರನ್ನು ಕರತರಲು ಕುದುರೆ ಸೈನ್ಯದ ಕೆಲವು ಮಂದಿ ನಾಯಕರು ಪುನಃ ದಂಡಿಗೆ ಹೋದರು.

ಬೆಳಗಾಗ ಪೆರೇಡ್ ಮಾಡಿಸಿ ಬಿಟ್ಟು ಫರಂಗೀ ಅಧಿಕಾರಿಗಳು ಹೊರಟು ಹೋದನಂತರ ದೇಸೀ ಬ್ಯಾರಕ್‌ಗಳಲ್ಲಿ ಎರಡನೆಯ ಕುದುರೆಸೈನ್ಯದ ಟೀಕ್‌ಸಿಂಗ್ ಬಂದಿದ್ದಾನೆಂಬ ಸಮಾಚಾರವು ಹರಡಿತು. ಅವರೆಲ್ಲರೂ ಒಟ್ಟಿಗೆ ಕೂಡಿದರು. ತಮಗೆಲ್ಲರಿಗೂ ವಿಪ್ಲವವು ಇಷ್ಟವೇ ಎಂದೂ ಹಿಂದಿನ ರಾತ್ರಿ ತಾವು ಬರದಿದ್ದುದು ತಪ್ಪೆಂದೂ ಒಪ್ಪಿಕೊಂಡರು. ತಾವೂ ಅದೇ ದಿನ ನವಾಬ್‌ಗಂಜ್‌ಗೆ ಬರುವುದಾಗಿಯೂ ಭರವಸೆ ಮಾಡಿದರು.

ಆದರೆ ಈ ಭರವಸೆಯಿಂದಲೇ ಟೀಕ್‌ಸಿಂಗನು ತೃಪ್ತನಾಗಲಿಲ್ಲ. ಅವನು ಅವರನ್ನು ಕೂಡಲೇ ಕರೆದುಕೊಂಡು ಹೋಗುವುದಕ್ಕೆ ಬಂದಿದ್ದನು. "ಮೊದಲಾಗಿದ್ದ ಮಾತಿನಂತೆ ನಾವು ಹೊರಟ ಕೂಡಲೇ ನಮ್ಮ ಹಿಂದೆ ನೀವೇಕೆ ಬರಲಿಲ್ಲ. ?" ಎಂದವನು ಕೇಳಿದನು.

ಪದಾತಿ ಸೈನ್ಯದ ಸುಬೇದಾರರಲ್ಲಿ ಒಬ್ಬನು " ನಿನ್ನೆಯ ದಿನ ನೀವು ಹೊರಟ ಕೂಡಲೇ ನಾವೂ ಹೊರಡಬೇಕೆಂದಿದ್ದೆವು. ಆದರೆ ನಾವು ಹೊರಡುವಷ್ಟರಲ್ಲಿ ಕರ್ನಲ್ ಇವಾನ್ಸ್,ಮೋರ್ ಇವರುಗಳು ಬಂದರು. ನೀವು

ವಿಪ್ಲವಕ್ಕೆ ಸೇರಬೇಡಿರೆಂದು ನಮಗೆ ಹೇಳಿದರು. ಆದರೂ ಅವರು ಹೊರಟ ಕೂಡಲೇ ಹೊರಡ ಬೇಕೆಂದಿದ್ದೆವು. ಅವರು ಬೆಳಗಾಗ ಪೇರೆಡ್ ಆಗು ವವರೆಗೆ ಹೊರಡಲಿಲ್ಲ. ಈಗ ಹೊರಡುತ್ತೇವೆ " ಎಂದನು.

ಟೇಕ್‌ಸಿಂಗನು – " ಆದರೇನಂತೆ ? ನೀವು ಅವರುಗಳನ್ನು ಕಡಿದು ಹಾಕಿ ನವಾಬ್‌ಗಂಜಿಗೆ ಬರಬೇಕಾಗಿತ್ತು " ಎಂದನು.

ಆ ಮಾತನ್ನು ಕೇಳಿ ಆ ಸೀಪಾಯಿಗಳ ಸಮೂಹದಲ್ಲಿ ಸ್ವಲ್ಪ ಕಳವಳ ವುಂಟಾಯಿತು. ಅನೇಕರು ಎದ್ದು ನಿಂದು ಮಾತನಾಡಲಾರಂಭಿಸಿದರು. ವಿಪ್ಲವಕ್ಕೆ ತಯಾರಾಗಿದ್ದರೂ ಅಧಿಕಾರಿಗಳನ್ನು ಕತ್ತರಿಸಿ ಹಾಕುವುದು ಅವರುಗಳಿಗೆ ಇಷ್ಟವಿದ್ದಂತೆ ಕಂಡು ಬರಲಿಲ್ಲ.

ಅದೇ ಅವಕಾಶವನ್ನು ಉಪಯೋಗಿಸಿ ಕೊಂಡು ಭವಾನೀಸಿಂಗನು ಎದ್ದು ನಿಂತು " ದೊರೆಗಳನ್ನು ಕೊಲ್ಲಬೇಕೆಂದು ಹೇಳುತ್ತೀಯಾ ? ನೀನು ಜೀವಂತನಾಗಿ ಇಲ್ಲಿಂದ ಹೊರಗೆ ಹೋಗಲಾರೆ" ಎಂದು ರೈಫಲ್ ತೆಗೆದನು.

ಪಕ್ಕದಲ್ಲಿ ನಿಂತಿದ್ದ ಸೀಪಾಯಿಯೊಬ್ಬನು ಅವನ ಕೈಲಿದ್ದ ರೈಫಲ್ ಕಿತ್ತು ಕೊಂಡು ಅದನ್ನು ತಿರುಗಿಸಿ ಭವಾನೀಸಿಂಗನ ತಲೆಯ ಮೇಲೆ ಜೋರಾಗಿ ಒಂದು ಏಟು ಕೊಟ್ಟು " ಕತ್ತೇ ಮಗನೇ ! ಹೊರಗೆ ಹೋಗು" ಎಂದು ಹೇಳಿದನು.

ಇತ್ತ ಹೊರಗೆ ತಳ್ಳಲ್ಪಟ್ಟ ಭವಾನೀಸಿಂಗನು ಅರ್ಧ ಮೈಲಿಯ ದೂರ ದಲ್ಲಿದ್ದ ಫರಂಗಿಗಳ ರಕ್ಷಣಾ ಶ್ರೇಣಿಗೆ ಓಡಿ ಬಂದು ಜನರಲ್ ವೀಲರ್ ಸಾಹೇಬರನ್ನು ಕಂಡನು. " ಎರಡನೆಯ ಕದುರೆಸೈನ್ಯದ ಟೇಕ್‌ಸಿಂಗನು ಬಂದಿದ್ದಾನೆ. ನಿಮ್ಮನ್ನೆಲ್ಲಾ ಕೊಲ್ಲಬೇಕೆಂದು ಅವನು ದುರ್ಬೋಧನೆ ಮಾಡುತ್ತಿದ್ದಾನೆ. ಸ್ವಲ್ಪ ಹೊತ್ತಿನಲ್ಲೇ ಅವರೆಲ್ಲಾ ಇಲ್ಲಿಗೆ ಬಂದು ಮುತ್ತಿಗೆ ಹಾಕುತ್ತಾರೆ " ಎಂದು ಅರಿಕೆ ಮಾಡಿದನು.

ಈ ಮಾತುಗಳನ್ನು ಕೇಳಿ ವೀಲರ್ ಸಾಹೇಬನಿಗೆ ಕಿಡಿಕಿಡಿ ಯಾಯಿ ತು. ಅವನು ಕೋಪದಿಂದ " ಓಹೋ ! ಅವರಿಲ್ಲಿಗೆ ಬರುತ್ತಾರೋ ? ನೀನು ಹೋಗು ! ನಾವು ಬಂದೋಬಸ್ತು ಮಾಡಿಸುತ್ತೇವೆ " ಎಂದು ಹೇಳಿದನು.

ಕರ್ನಲ್ ಇವಾಜ್‌ನನ್ನು ಕರೆಯಿಸಿ "ಬ್ಯಾರಕ್ಕಿನಲ್ಲಿ ಎಲ್ಲರೂ ಸೇರಿ ಪಿತೂರಿ ಮಾಡುತಿದ್ದಾರಂತೆ. ಟೇಕ್‌ಸಿಂಗನು ಬೇರೆ ಬಂದಿದ್ದಾನೆ. ಅವರು ನಮ್ಮ ರಕ್ಷಣಾ ಶ್ರೇಣಿಯನ್ನು ಮುತ್ತಿಗೆ ಹಾಕಿ ನಮ್ಮೆಲ್ಲರನ್ನೂ ಕೊಲ್ಲುತ್ತಾ

ರಂತೆ. ಅವರಿತ್ತ ಬರುವ ಮೊದಲೇ ಅತ್ತ ಕಡೆಗೆ ಫಿರಂಗಿಗಳನ್ನು ಹಾರಿಸಿರಿ. ನಮ್ಮ ಸೈನ್ಯವು ಯುದ್ಧಕ್ಕೆ ಸಿದ್ಧವಾಗಲಿ " ಎಂದು ಆಜ್ಞಾಪಿಸಿದನು.

ಇವಾಸ್‌ನು – " ಅಲ್ಲಿ ಫಿರಂಗಿಗಳೇ ಇಲ್ಲ. ನಮ್ಮಲ್ಲಿ ಬಲವಾದ ಫಿರಂಗಿಗಳಿವೆ. ಅವರು ನಮ್ಮನ್ನು ಮುತ್ತುವುದಕ್ಕಿಂತ ಬೇರೊಂದು ಅವಿವೇಕವಿಲ್ಲ. " ಎಂದು ಹೇಳಿ ಹೊರಟು ಹೋದನು.

ಸ್ವಲ್ಪ ಹೊತ್ತಿನೊಳಗಾಗಿ ಇಂಗ್ರೇಜಿಯವರ ರಕ್ಷಣಾ ಶ್ರೇಣಿಯ ಕಡೆಯಿಂದ ಫಿರಂಗಿಗಳು ಹಾರಿದವು. ಒಂದು ! ಎರಡು ! ! ಮೂರು ! ! !

ಪದಾತಿ ಸೈನಿಕರು ವಿಪ್ಲವಕ್ಕೆ ಒಪ್ಪಿಕೊಂಡಿದ್ದರೂ ಟೀಕ್‌ಸಿಂಗನ ಮಾತುಗಳು ಆ ಕೂಡಲೇ ಅವರನ್ನು ನವಬ'ಗಂಜಿನ ಕಡೆಗೆ ಹೊರಡಿಸುತ್ತಿದ್ದವೋ, ಇಲ್ಲವೋ ಅಂತೂ ಫರಂಗಿಯವರು ಹಾರಿಸಿದ ಫಿರಂಗಿಗಳಿಂದ ಆ ಕೆಲಸವಾಯಿತು.

ಫಿರಂಗಿಗಳು ಹಾರಲು ಆರಂಭವಾದ ಕೂಡಲೇ ಪದಾತಿ ಸೈನಿಕರಲ್ಲಿ ಮಹತ್ತರವಾದ ಕೋಲಾಹಲವು ಆರಂಭವಾಯಿತು.ಸೈನಿಕರ ಬಳಿ ಉತ್ತಮ ಆಯುಧಗಳಾಗಲೀ ಬಲವಾದ ಫಿರಂಗಿಗಳಾಗಲೀ ಇರಲಿಲ್ಲ. ಅವರಿಗೆ ಏನು ಮಾಡುವುದಕ್ಕೂ ತೋರಲಿಲ್ಲ. ಆ ಕೋಲಾಹಲದಲ್ಲಿ, ಆ ಗಡಿಬಿಡಿಯಲ್ಲಿ ಅವರೆಲ್ಲರೂ ನವಾಬಗಂಜಿನ ಕಡೆಗೆ ಓಡಿಹೋದರು.

## ಕಾನ್ಪುರದ ಕದನ

ಟೀಕ'ಸಿಂಗನ ಒಳ್ಳೆಯ ಶೂರ. ಸೀಪಾಯಿಗಳ ವಿಶ್ವಾಸವನ್ನು ಪಡೆದವನು. ಯುದ್ಧ ತಂತ್ರವನ್ನು ತಿಳಿದವನು. ಇದರ ಮೇಲೆ ಬ್ರಹ್ಮವರ್ತವು ಭಾರತ ಕ್ರಾಂತಿಯ ಮೂಲಸ್ಥಾನ. ಅದೀಗ ಕಾನ್ಪುರಕ್ಕೆ ಪರಿವರ್ತಿತವಾಗಿದ್ದಿತು. ವಿಪ್ಲವದ ಮಹಾನಾಯಕರೆಲ್ಲರೂ ಅಲ್ಲಿಯೇ ಇದ್ದರು. ಹಾಗಿರುವಾಗ ವಿಪ್ಲವದ ಬೆಳವಣಿಗೆಯಲ್ಲಿ ಸ್ವಲ್ಪವೂ ಹೆಚ್ಚು ಕಡಿಮೆಯಾಗುವುದು ಅಲ್ಲಿ ಸಂಭವವೇ ಇರಲಿಲ್ಲ. ಸೀಪಾಯಿಗಳು ಫರಂಗಿಯವರ ರಕ್ಷಣಾಸ್ಥಾನಗಳನ್ನು ಮುತ್ತಿ ಅವರನ್ನು ಸದೆಬಡಿಯ ಬೇಕೆಂದು ಉತ್ಸಾಹ

ವುಳ್ಳವರಾಗಿದ್ದರು. ಅಂತಹ ಪರಾಕ್ರಮವೂ ಅವರಿಗಿದ್ದಿತು ಆದರೆ ವಿಪ್ಲವದ ರೀತಿಗೆ ವಿರೋಧವಾದ ಆ ಅವಸರಕ್ಕೆ ಅವಕಾಶವು ಕಾನ್‌ಪುರದಲ್ಲಿ ಸಿಕ್ಕಲಿಲ್ಲ.

ಮೀರತ್‌ನಲ್ಲಿ ಕ್ರಾಂತಿಯು ನಿರ್ದಿಷ್ಟ ದಿನಕ್ಕಿಂತಲೂ ಮೊನಲು ಆರಂಭವಾದುದರಿಂದ ವಿಪ್ಲವದರೀತಿಯೇ ಬದಲಾವಣೆಯನ್ನು ಹೊಂದಿದ್ದಿತು. ಮೇ ೩೧ ನೆಯ ತಾರೀಖಿನ ದಿನ ವಿಪ್ಲವವು ಆರಂಭವಾಗ ಬೇಕೆಂದು ಗೊತ್ತಾಗಿದ್ದಿತು. ಆ ದಿನವೇ ಎಲ್ಲಾ ಕಡೆಗಳಲ್ಲಿಯೂ ವಿಪ್ಲವವು ಆರಂಭವಾಗಿದ್ದರೆ ಕುಂಪಣಿಯ ಸರ್ಕಾರವು ಆ ಪ್ರದೇಶಗಳಿಂದ ಸೈನ್ಯಗಳನ್ನು ಎತ್ತಲಾಗುತ್ತಿರಲಿಲ್ಲ. ಅಲ್ಲೆಲ್ಲಾ ಕೆಲಕಾಲವಾದರೂ ವಿಪ್ಲವವು ನಡೆದಿದ್ದರೆ ಫರಂಗಿಯವರ ಸೇನೆಗಳು ಮೊದಲಿದ್ದ ಪ್ರದೇಶಗಳನ್ನು ಸರ್ವಥಾ ಬಿಟ್ಟು ಹೋಗುತ್ತಿರಲಿಲ್ಲ. ಮಿಕ್ಕಕಡೆಗಳಲ್ಲೆಲ್ಲಾ ವಿಪ್ಲವವು ಯಶಸ್ವಿಯಾಗಿ ಫರಂಗಿಗಳು ಬಲವಾಗಿರುವ ಪ್ರದೇಶಗಳಿಗೆ ವಿಪ್ಲವಕಾರು ಸೈನ್ಯಗಳನ್ನು ತೆಗೆದುಕೊಂಡು ಹೋಗಿ ಅವುಗಳನ್ನು ಧ್ವಂಸಮಾಡ ಬಹುದಾಗಿದ್ದಿತು.

ಈಗ ಹಾಗಾಗಲಿಲ್ಲ. ಬ್ರಿಟಿಷರ ಸೈನ್ಯದ ರಚನೆಯೇ ಬದಲಾಯಿಸಿ ಹೋಯಿತು. ಆದರಿಂದ ವಿಪ್ಲವಕಾರರು ತಮ್ಮ ಯುದ್ಧತಂತ್ರವನ್ನು ಬದಲಾಯಿಸ ಬೇಕಾಗಿ ಬಂದಿತು. ವಿಪ್ಲವದ ನಾಯಕರು ಆ ಕಾರ್ಯದಲ್ಲಿ ಮಗ್ನರಾಗಿದ್ದರು.

ಮೀರತ್, ದೆಹಲಿ, ಅಲಹಾಬಾದ್, ಕಾಶೀ, ರೋಹಿಲಖಂಡ'ಔಂದ್‌ಗಳಲ್ಲಿ ವಿಪ್ಲವವು ಬಂದಿತ್ತು. ಮಿಕ್ಕ ಕಡೆಗಳಲ್ಲಿ ಆ ಜ್ವಾಲೆಯು ಹತ್ತಿಕೊಂಡಿರಲಿಲ್ಲ. ಆದ್ದರಿಂದ ಕಾನ್‌ಪುರದಲ್ಲಿ ಆ ಬೆಂಕಿಯನ್ನು ಬೇಗ ಆರಿಸಿಬಿಡದೇ ನಿಧಾನವಗಿ ಉರಿಸಬೇಕಾಗಿತ್ತು.

ಈ ನೀತಿಯನ್ನು ಅರಿತ ಟೇಕ್‌ಸಿಂಗನು ತನ್ನ ಯುದ್ಧ ಯಂತ್ರವನ್ನು ವೇಗವಾಗಿ ನಡೆಯಿಸಲಿಲ್ಲ. ಎಲ್ಲೋ ಕೆಲವು ಸೈನ್ಯಗಳನ್ನು ಮಾತ್ರ ಫರಂಗಿಗಳೊಡನೆ ಯುದ್ಧ ಮಾಡುವುದಕ್ಕೆ ಬಿಟ್ಟಿದ್ದನು.

ಆದರೂ ಆ ನಿದಾನವಾದ ಯುದ್ಧದಿಂದ ಫರಂಗಿಗಳಿಗೆ ಬಹಳ ತೊಂದರೆ ಯಾಗಿದ್ದಿತು. ವಿಪ್ಲವಕಾರರ ಸೈನ್ಯವು ಬಂದು ಅವರ ರಕ್ಷಣಾಸ್ಥಾನದ ಬಳಿ ಬೀಡುಬಿಡುತ್ತಲೇ ಅವರಿಗೆ ಹೊರಗಿನ ಸಂಬಂಧವು ತಪ್ಪಿಹೋಯಿತು. ಮೊದಲು ಮೊದಲು ಭಿಸ್ತಿಗಳು ಅವರಿಗೆ ಗಂಗಾನದಿ ಯಿಂದ ನೀರು ತಂದು ಕೊಡುತ್ತಿದ್ದರು. ಅದೂ ತಪ್ಪಿ ಹೋಯಿತು. ಫರಂಗಿಗಳು ಒಳಗಿದ್ದ

ಒಂದೇ ಒಂದು ಭಾವಿಯ ಮೇಲೆಯೇ ಅವಲಂಬಿತರಾಗಬೇಕಾಯಿತು. ಫರಂಗಿಗಳು ಅವರ ರಕ್ಷಣಾ ಕ್ಷೇತ್ರದಿಂದ ಹೊರಗೆ ತಲೆಯಿಡಲು ಸಾಧ್ಯವೇ ಆಗುತ್ತಿರಲಿಲ್ಲ. ಹೊರಗಿನಿಂದ ಅವರಿಗೆ ಸಮಾಚಾರವು ಬರುವುದು ಸಾಧ್ಯವೇ ಇರಲಿಲ್ಲ.

ದಿನವೂ ಅಲಹಾಬಾದಿನಿಂದ ಸೈನ್ಯವು ಬರುತ್ತದೆಂದು ಅವರು ನಿರೀಕ್ಷೆ ಮಾಡುತ್ತಿದ್ದರು. ಅದು ಬರಲಿಲ್ಲ. ಬರುವ ವರ್ತಮಾನವೂ ಬರಲಿಲ್ಲ. ಹತ್ತಿರದಲ್ಲಿರುವ ಗುಡ್ಡ ಒಂದರ ಮೇಲೆ ನಿಂತು ಈದಿನ ಭಿಸ್ತಿಯೊಬ್ಬನು ಕೂಗುತ್ತಾನೆ. "ನನ್ನ ಪ್ರಾಣದ ಮೇಲೆ ಆಸೆ ಬಿಟ್ಟು ಹೇಳುತ್ತಿದ್ದೇನೆ. ಫರಂಗಿಯವರಲ್ಲಿ ನನಗಿರುವ ಸ್ವಾಮಿಭಕ್ತಿಯಿಂದ ಹೇಳುತ್ತೇನೆ. ಅಲಹಾಬಾದಿನಿಂದ ಉತ್ತಮವಾದ ಫಿರಂಗಿಗಳುಳ್ಳ ಇಂಗ್ರೇಜೀ ಸೈನ್ಯವು ಬಂದು ಆಚೆ ದಂಡೆಯಲ್ಲಿ ಬೀಡು ಬಿಟ್ಟಿದೆ. ನಾಳೆಯ ದಿನ ಅವರು ಬರುತ್ತಾರೆ. ಇದರಿಂದ ವಿಪ್ಲವಕಾರರೆಲ್ಲರೂ ಭಯವಿಹ್ವಲರಾಗಿದ್ದಾರೆ" ಎಂದು ಕೂಗುತ್ತಾನೆ. ಇದನ್ನು ಕೇಳಿ ಲಕ್ನೋದಿಂದ ಸೈನ್ಯವು ಬಂದಿತೆಂದು ಸಂತೋಷಿಸುತ್ತಾರೆ. ಪುನಃ ನಾಳೆಯ ದಿನವೂ ಇದೇ ಭಿಸ್ತಿಯು ನಿಂತು ಕೂಗುತ್ತಾನೆ. "ಫರಂಗಿಯವರಿಗೆ ಜಯವಾಗಲಿ. ಗಂಗಾನದಿಯು ಉಕ್ಕಿ ಬಂದುದರಿಂದ ಇಂಗ್ಲಿಷ್ ಸೈನ್ಯವು ಸಕಾಲದಲ್ಲಿ ಬರಲಿಲ್ಲ. ಹೇಗೇ ಆದರೂ ಈದಿನ ಸಾಯಂಕಾಲದೊಳಗಾಗಿ ಬರುತ್ತದೆ"

ಸಾಯಂಕಾಲವಾಗುತ್ತದೆ. ರಾತ್ರಿಯಾಗುತ್ತದೆ. ಮೂರನೆಯ ದಿನವೂ ಕಳೆದು ಹೋಗುತ್ತದೆ. ಆದರೆ ಇಂಗ್ಲಿಷ್ ಸೈನ್ಯಗಳು ಬರುವುದಿಲ್ಲ. ಅವರಿಗೆಲ್ಲಾ ನಿರಾಶೆಯಾಗುತ್ತದೆ. ಹೀಗೆ ಒಂದಲ್ಲ ಒಂದು ಬಗೆಯಾದ ಘಟನೆಗಳು ನಡೆಯುತ್ತವೆ.

ಹೀಗಿರುವಾಗ ಒಮ್ಮೆ ಷಫರ್ಡ್ ಎಂಬಾತನು ಸರ್ ವೀಲರ್‌ನ ಬಳಿಗೆ ಹೋದನು. "ವರ್ತಮಾನ ತರಲು ಹೊರಗೆ ಹೋಗುತ್ತಿರುವ ನಮ್ಮ ಗೂಢಚಾರರು ವಿಫಲರಾಗುತ್ತಿದ್ದಾರೆ. ಶತ್ರು ಸೈನಿಕರಲ್ಲಿ ವಿದ್ವೇಶದ ಬೀಜಗಳನ್ನು ಬಿತ್ತುವುದರಲ್ಲಿಯೂ ಅವರು ಭಗ್ನಮನೋರಥರಾಗುತ್ತಿದ್ದಾರೆ. ಆದ್ದರಿಂದ ನಾನು ಆ ಕೆಲಸಕ್ಕೆ ಹೋಗಬೇಕೆಂದಿದ್ದೇನೆ" ಎಂದು ಹೇಳಿದನು.

ವೀಲರ್ ಹೇಳಿದನು. "ಷಫರ್ಡ್! ರಹಸ್ಯಕಾರ್ಯಗಳಲ್ಲಿ ಪರಿಣತರಾದ ಗೂಢಚಾರರೇ ವಿಫಲರಾಗುತ್ತಿದ್ದಾರೆ. ಹಾಗಿರುವಾಗ ಹೊಸಬನಾದ ನೀನು ಹೇಗೆ ಇದನ್ನು ಸಾಧಿಸಬಲ್ಲೆ? ಅದರಲ್ಲಿಯೂ ಈ ನಾನಾರಾಯನೂ ಅವನ ಜನಗಳೂ ಬಹಳ ಕಪಟಿಗಳು."

"ಇಲ್ಲ! ಜನರಲ್, ನನ್ನನ್ನು ಕಳುಹಿಸಿರಿ. ನಾನು ಕೆಲಸ ಮಾಡಿಕೊಂಡೂ ಬರುತ್ತೇನೆಯೋ ಇಲ್ಲವೋ? ನೋಡಿರಿ"

ವೀಲರ್ ಸಾಹೇಬನು "ಸರಿ! ಇವನು ಹೋಗಿ ಬರಲಿ. ನಷ್ಟವೇನು?" ಎಂದುಕೊಂಡು "ಹೋಗಿಬಾ! ಆದರೆ ಬಹಳ ಹುಷಾರಾಗಿರು. ಒಂದು ವೇಳೆ ಸಿಕ್ಕಿಬಿದ್ದು ನಮ್ಮ ಸೈನ್ಯದ ವಿಷಯವನ್ನು ಕೇಳಿದರೆ–ಫರಂಗೀ ಸೈನ್ಯವು ಬಲವಾಗಿದೆ ಎಂದುಹೇಳಬೇಕು. ಇನ್ನೊಂದು ವರ್ಷಕಾಲ ಯುದ್ಧಮಾಡಿದರೂ ಜಗ್ಗುವ ಹಾಗಿಲ್ಲವೆಂದು ಹೇಳಬೇಕು. ಅವರ ಬಲಾಬಲಗಳನ್ನು ತಿಳಿದುಕೊಳ್ಳಬೇಕು. ನಮಗೆ ಅಲಹಾಬಾದಿನ ಮತ್ತು ಲಕ್ನೋದ ಸೇನೆಗಳು ಬರುವ ಹಾಗಿದೆಯೇ, ಇಲ್ಲವೇ? ಇನ್ನೂ ಯಾಕೆ ಬಂದಿಲ್ಲ? ಮುಂತಾದ ವಿವರಗಳು ನಮಗೆ ತಿಳಿಯದೇ ಇದ್ದರೂ ನಾನಾ ಕಡೆಯವರಿಗೆ ಅದು ಬಹಳ ಚೆನ್ನಾಗಿ ತಿಳಿದಿದೆ. ಆ ವಿಷಯಗಳನ್ನೆಲ್ಲಾ ಸರಿಯಾಗಿ ತಿಳಿದುಕೊಳ್ಳಬೇಕು"-ಎಂದು ಹೇಳಿದನು.

ಅರ್ಧರಾತ್ರಿಯ ಸುಮಾರಿನಲ್ಲಿ ರಕ್ಷಣಾ ಶ್ರೇಣಿಯ ಗೋಡೆಯಿಂದ ಹೊರಗಡೆ ಒಬ್ಬ ಅಡಿಗೆಯವನು ಬಂದನು. ಬಂದು ಕಾ಼ನ್‌ಪುರವನ್ನು ಸೇರಿದನು. ಉಳಿದರ್ಧ ರಾತ್ರಿಯನ್ನು ಯಾವುದೋ ಜಗುಲಿಯ ಮೇಲೆ ಮಲಗಿ ಕಳೆದನು. ಮಾರನೆಯ ದಿನ ಪ್ರಾತಃಕಾಲ ಕಾ಼ನ್‌ಪುರದಲ್ಲೆಲ್ಲಾ ಸುತ್ತಾಡಿದನು.

ಹನ್ನೆರಡು ಗಂಟೆಯ ವೇಳೆಗೆ ಅವನು ರಕ್ಷಣಾ ಶ್ರೇಣಿಯ ಬಳಿಗೆ ಬಂದನು. ವಿಪ್ಲವಕಾರರಿಗೂ ಫರಂಗಿಯವರಿಗೂ ಯುದ್ಧವಾಗುತ್ತಿದ್ದಿತು. ಈ ಅಡಿಗೆಯವನು ಅಲ್ಲೊಂದು ಕಡೆ ಕುಳಿತು ಕೊಂಡನು.

ಅಷ್ಟು ಹೊತ್ತಿಗೆ ಅತ್ತ ಕಡೆ ನೀರು ಹೊತ್ತುಕೊಂಡು ಹೋಗುತ್ತಿದ್ದ ಭಿಸ್ತಿಯೊಬ್ಬನು ಇವನನ್ನು ನೋಡಿ "ಏನಯ್ಯಾ! ಹಾಗೆ ಕುಳಿತಿದ್ದೀ? ನಿನಗೆ ನಾಚಿಕೆಯಾಗುವುದಿಲ್ಲವೇ? ಸೈನಿಕರೆಲ್ಲಾ ಯುದ್ಧ

ಮಾಡುತ್ತಿದ್ದರೆ ನೀನು ನೊಣ ಹೊಡೆಯುತ್ತಾ ಕುಳಿತಿದ್ದೀಯಾ? ಎದ್ದು ಹೋಗಿ ತೋಪುಗಳವರಿಗೆ ಸಹಾಯಮಾಡು"-ಎಂದು ಗದರಿದನು.

ಅಡಿಗೆಯವನು "ಆ-ಆ" ಎಂದು ಕಣ್ಣು ಬಿಟ್ಟನು.

ಭಿಸ್ತಿಯು ಹೇಳಿದನು. "ಧಾಂಡಿಗನಂತಿದ್ದೀಯೇ! ಸೋಮಾರಿಯಾಗಿ ಕಾಲ ಕಳೆಯುತ್ತಿದ್ದಿಯೆ! ಹೋಗಿ ತೋಪಿನವರಿಗೆ ಸಹಾಯ ಮಾಡು ಎಂದರೆ,ಆ-ಆ-ಎಂದು ಮುಖ ಮುಖ ನೋಡುತ್ತೀಯೇ, ನೋಡು. ಒಂಟಿ ಕಣ್ಣಿನ ದಫೇದಾರ ಗುಲಾಮಾಲಿಯ ಕಡೇ ಮಗ ಕರೀಮಾಲಿಯು ಏನೋ ಒಂದು ಹೊಸ ಬಗೆಯ ತೋಪನ್ನು ಕಂಡು ಹಿಡಿದಿರುವನಂತೆ. ಅದನ್ನು ಹಾರಿಸಿದರೆ ದೂರದಲ್ಲಿರುವ ಮನೆಗಳು ಹತ್ತಿ ಉರಿಯುತ್ತವೆಯಂತೆ ಪೇಶ್ವೆಗಳು ಅವನ ಬುದ್ಧಿಗೆ ಮೆಚ್ಚಿಕೊಂಡು ಒಂದು ಶಾಲನ್ನೂ ನೂರುರೂಪಾಯಿಗಳ ಬಹುಮಾನವನ್ನೂ ಕೊಟ್ಟಿದ್ದಾರೆ. ಹಾಗೇನಾದರೂ ಮಾಡುವ ಬದಲು ಕುಳಿತಿದ್ದೀಯಲ್ಲ! ಏಳು!" ಎಂದನು.

ಬಾಹುಕನು ಎದ್ದು ರಕ್ಷಣಾ ಶ್ರೇಣಿಯ ಕಡೆಗೆ, ತೋಪುಗಳು ಹಾರುತ್ತಿದ್ದ ಕಡೆಗೆ ಹೋದನು. ಅಷ್ಟರಲ್ಲಿ ಯಾರೋ ಹಿಂದಿನಿಂದ ಬಂದು ಅವನ ಭುಜದ ಮೇಲೆ ಕೈಯಿಟ್ಟರು.

ಬಾಹುಕನು ತಿರುಗಿ ನೋಡಿದನು. ಸುಮಾರು ಆರೂವರೆ ಅಡಿ ಎತ್ತರದ ಮಹಮದೀಯನು ಅವನ ಹಿಂದೆ ನಿಂತಿದ್ದನು.

ಬಾಹುಕನನ್ನು ನೋಡಿ-"ಎಲ್ಲಿ ಹೋಗುತ್ತಿದ್ದೀಯೆ?" ಎಂದು ಕೇಳಿದನು.

"ತೋಪು ಸೈನ್ಯದವರಿಗೆ ಏನಾದರೂ ಸಹಾಯ ಮಾಡೋಣವೆಂದು ಹೋಗುತ್ತಿದ್ದೇನೆ"-ಎಂದು ಬಾಹುಕನು ಉತ್ತರವಿತ್ತನು.

"ನಿನ್ನ ಸಹಾಯವು ಈ ಸೈನ್ಯಕ್ಕೆ ಬೇಡ. ನೀನು ನನ್ನ ಹಿಂದೆ ಬಾ. ಏನಾದರೂ ಓಡಿಹೋಗಲು ಪ್ರಯತ್ನ ಮಾಡಿದೆಯೋ ತುಪಾಕಿಯಿಂದ ಹೊಡೆದು ಕೊಂದು ಹಾಕುತ್ತೇನೆ" ಎಂದು ಆಗಂತುಕನು ಎಚ್ಚರಿಸಿದನು.

ಆರೂವರೆ ಅಡಿ ಎತ್ತರದ ಮಹಮದೀಯನು ಹೋಗುತ್ತಿದ್ದಾನೆ. ಅವನ ಜೊತೆಯಲ್ಲಿ ಹಿಂದುವಿನಂತೆ ಕಂಡುಬರುತ್ತಿದ್ದ ಅಡಿಗೆಯವನೊಬ್ಬನು ಹೋಗುತ್ತಿದ್ದಾನೆ.

ಎದುರಿಗೆ ಒಂದು ಸುಂದರ ವ್ಯಕ್ತಿಯು ಬಂದಿತು. ಮೊದಲೇ ಮಂದ ಹಾಸದಿಂದ ಅರಳಿದ್ದ ಆ ವ್ಯಕ್ತಿಯ ಮುಖವು ಮತ್ತೊಂದು ನಗವನ್ನು ಚೆಲ್ಲಿತು.

ಆ ವ್ಯಕ್ತಿಯು ಕೇಳಿತು – "ಏನು ಗುಲಾಮಾಲಿ! ಮನೆಯಲ್ಲಿ ಏನಾದರೂ ದಾವತ್ ಉಂಟೋ? ಅಡಿಗೆಯವನನ್ನು ಎಲ್ಲಿ ಹಿಡಿದೇ?

ಬಾಹುಕನು ತಲೆ ಎತ್ತಿ ನೋಡಿದನು. ಗುಲಾಮಾಲಿಯ ಕಡೆಗೆ ನೋಡಿದನು. ಅವನಿಗೆ ಒಂದು ಕಣ್ಣಿರಲಿಲ್ಲ.

ಬಾಹುಕನು ಹೇಳಿದನು-"ದಫೇದಾರರೇ! ನಿಮ್ಮ ಮಗ ಹೊಸ ಬಗೆಯ ತೋಪು ಕಂಡು ಹಿಡಿದು ಪೇಶ್ವೆಗಳಿಂದ ಬಹುಮಾನವನ್ನು ಪಡೆದಿರುವನಲ್ಲ. ಅದಕ್ಕಾಗಿ ಈದಿನ ರಾತ್ರಿಯೇ ದಾವತ್ ಮಾಡಿಸಿರಿ. ನಾನು ಚೆನ್ನಾಗಿ ಅಡಿಗೆ ಮಾಡುತ್ತೇನೆ" ಎಂದನು.

ಗುಲಾಂ ಆಲಿಯು "ಅದು ಸಹ ಈಗಾಗಲೇ ನಿನಗೆ ಗೊತ್ತಾಯಿತೋ?" ಎಂದು ಕೇಳಿದನು.

ಆ ವ್ಯಕ್ತಿಯು "ಏನು ಗುಲಾಮಾಲೀ! ಏನು ಸಮಾಚಾರ?" ಎಂದು ಪುನಃ ಕೇಳಿತು.

ಗುಲಾಮಾಲಿಯು "ಅಜೀಜಾ!...." ಎಂದು ಹೇಳಿ ಮುಂದೆ ಮಾತನಾಡುವುದಕ್ಕೆ ತೊಡಗಿದನು.

ಆ ವ್ಯಕ್ತಿಯನ್ನು ಗುಲಾಮಾಲಿಯು ಅಜೀಜಾ ಎಂಬ ಹೆಣ್ಣು ಹೆಸರಿನಿಂದ ಕರೆದುದು-ಬಾಹುಕನಿಗೆ ಆಶ್ಚರ್ಯವಾಯಿತು. ಎದುರಿಗೆ ನಿಂತಿರುವ ವ್ಯಕ್ತಿಯು ಹೆಣ್ಣೆ? ಹಾಗಾದರೆ ಗಂಡು ವೇಷವನ್ನು ಹಾಕಿಕೊಂಡಿರುವುದೇಕೆ?

"ಅಜೀಜಾ" ಎಂದ ಗುಲಾಮಾಲಿಯು "ಇವನೊಬ್ಬ ಹರಾಂ. ಫರಂಗಿಯವನು. ಗೂಢಚಾರನಾಗಿ ರಕ್ಷಣಾ ಶ್ರೇಣಿಯಿಂದ ಹೊರಗೆ ಬಂದಿದ್ದಾನೆ. ಈಗಾಗಲೇ ನಮ್ಮ ಕರೀಂ ಕಂಡು ಹಿಡಿದಿರುವ ಹೊಸ ತೋಪಿನ ವಿಷಯವನ್ನು ಸಂಗ್ರಹಿಸಿಟ್ಟು ಕೊಂಡಿದ್ದಾನೆ. ಇವನನ್ನು ಟೀಕ್ ಸಿಂಗರ ಬಳಿಗೆ ಕರದುಕೊಂಡು ಹೋಗುತ್ತಿದ್ದೇನೆ"–ಎಂದನು.

ಬಾಹುಕನಿಗೆ ಮೃತ್ಯುವೇ ಸನ್ನಿಹಿತವಾದಂತಾಯಿತು. ಮೈ ಎಲ್ಲಾ ಬೆವರಿತು. ಅವನು "ನಾನೇನೂ ಮಾಡಲಿಲ್ಲ. ಬಿಟ್ಟು ಬಿಡಿ. ಹೊರಟು ಹೋಗುತ್ತೇನೆ" ಎಂದು ಅಂಗಲಾಚಿಸಿದನು.

ಅಜೀಜ್ಞಾ "ಅವನೇನೂ ಮಾಡಲಿಲ್ಲವಂತೆ. ದಫೇದಾರರೇ! ಬಿಟ್ಟು ಬಿಡಿರಿ. ಹೊರಟು ಹೋಗುತ್ತಾನೆ" ಎಂದಳು.

ಬಾಹುಕನು ಅವಳ ಮುಖವನ್ನು ನೋಡಿ–"ಹೌದು! ಹೊರಟು ಹೋಗುತ್ತೇನೆ" ಎಂದನು.

ಗುಲಾಂಮಾಲಿಯು "ನಿಜವಾಗಿ ಹೇಳು. ನೀನು ಪರಂಗೀ ಗುಪ್ತ ಚಾರನು ಹೌದೇ, ಇಲ್ಲವೇ?" ಎಂದನು.

ಸುಳ್ಳು ಹೇಳುವುದು ಪ್ರಯೋಜನವಿಲ್ಲವೆಂದು ತಿಳಿದುಕೊಂಡು ಬಾಹುಕನು ಹೌದೆಂದನು. "ಆದರೆ ನಾನು ಏನೂ . ಮಾಡಲಿಲ್ಲ. ದಫೇ ದಾರರೇ! ಈಗ ತಾನೇ ಬಂದೆ" ಎಂದು ಹೇಳಿದನು.

ದಫೇದಾರನು "ನೀನು ಏನು ಮಾಡಿದೆಯೋ ಏನೋ ನನಗೆ ಅದೊಂದೂ ಗೊತ್ತಿಲ್ಲ. ಅದೆಲ್ಲಾ ವಿಚಾರಿಸುವುದು ಸೇನಾಧಿಪತಿಗಳ ಕೆಲಸ. ಏನುಮಾಡಲಿ, ಮಾಡದಿರಲಿ, ಗೂಢಚಾರಿಯಾಗಿ ಬರುವುದೇ ಅಪರಾಧ" ಎಂದನು.

ದಫೇದಾರನು ದಯಾದಾಕ್ಷಿಣ್ಯಗಳಿಲ್ಲದ ಖಡಾಖಡೀ ಮನುಷ್ಯ ನಂತೆ ಕಂಡು ಬರುತ್ತಿದ್ದನು. ಆದ್ದರಿಂದ ಬಾಹುಕನು ಪುರಷವೇಷಧಾ ರಿಯಾದ ಸ್ತ್ರೀಯನ್ನು ಕಂಡು "ನೀವಾರೋ ತಿಳಿಯದು. ಆದರೂ ನಿಮ್ಮನ್ನು ಬೇಡಿಕೊಳ್ಳುತ್ತೇನೆ. ನನ್ನನ್ನು ಬಿಡಿಸಿ ಬಿಡಿ. ನಾನು ಯಾವ ತಪ್ಪನ್ನೂ ಮಾಡಿದವನಲ್ಲ" ಎಂದು ಅವಳ ಕಾಲುಗಳನ್ನು ಕಟ್ಟಿ ಕೊಂಡನು.

"ಬದ್ಮಾಷ್! ಏಳೋ, ಮೇಲೆ" ಎಂದು ಗುಲಾಮಾಲಿಯು ಕೂಗಿದನು.

ಅಂಗಲಾಚುತ್ತಿರುವ ಫರಂಗೀ ಗೂಢಚಾರಗಳನ್ನು ನೋಡಿ ಅಜೀಜ್ಞಾ ಅವನನ್ನು ಮೇಲೆತ್ತುತ್ತಾ ಮುಖದ ಬಳಿ ಮುಖವಿಟ್ಟು ಮೆಲ್ಲನೆ ಹೇಳಿದಳು. "ಹೋಗು! ಅವರೇನು ಮಾಡುತ್ತಾರೋ ಮಾಡಲಿ. ನಾನು ಬಂದು ನಿನ್ನನ್ನು ಬಿಡಿಸುತ್ತೇನೆ. ಧೈರ್ಯವಾಗಿರು" ಎಂದು ಹೇಳಿದಳು.

ಗುಲಾಮಾಲಿಯು ತನ್ನ ಖೈದಿಯನ್ನು ಎಳೆದುಕೊಂಡು ಸೇನಾಧಿಪತಿಯಾದ ಟೇಕ್‌ಸಿಂಗನ ಬಳಿ ಎಳೆದುಕೊಂಡು ಹೋದನು.

ಅಲ್ಲಿ ಷಫರ್ಡ್‌ನ ವಿಚಾರಣೆಯಾಯಿತು. ಅವನು ತಾನು ಫರಂಗಿಯವರ ಗೂಢಚಾರನೆಂದೂ ವೀಲರ್ ಸಾಹೇಬನು ತನ್ನನ್ನು ಕಳುಹಿಸಿದನೆಂದೂ ನಿಜವನ್ನು ಹೇಳಿದನು.

ಟೇಕ್ ಸಿಂಗನು–"ನಿಮ್ಮ ಸೈನ್ಯವು ಹೇಗಿದೆ? ರಕ್ಷಣಾ ಶ್ರೇಣಿಯಲ್ಲಿರುವ ಫರಂಗಿಯವರು ಭರವಸೆಯಿಂದಿರುವರೇ? ನಿಮ್ಮ ಸರಬರಾಜು ಯಾವ ರೀತಿಯಾಗಿದೆ?" ಎಂದು ಕೇಳಿದನು.

ಅದಕ್ಕೆ ಷಫರ್ಡ್ "ನಮ್ಮ ಸೈನ್ಯವು ಭರವಸೆಯಿಂದಿವೆ. ಇನ್ನೊಂದು ವರ್ಷವಾದರೂ ಯುದ್ಧ ಮಾಡುತದ್ತೆ" ಎಂದನು.

ಟೇಕ್ ಸಿಂಗನು ಅವನ ಕಡೆಗೆ ದುರುಗುಟ್ಟಿಕೊಂಡು ನೋಡಿದನು. ಆ ದೃಷ್ಟಿಗೆ ಹೆದರಿ ಷಫರ್ಡ್ "ನಿಜ ಹೇಳುತ್ತಿದ್ದೇನೆ, ಖಾವಿಂದ್! ಫರಂಗಿಗಳು ಬಲವಾಗಿದ್ದಾರೆ" ಎಂದನು.

ಟೇಕ್ ಸಿಂಗನು ನಕ್ಕು–"ಸರಿ" ಎಂದನು.

ಷಫರ್ಡ್‌ಗೆ ಮೂರು ವರ್ಷಗಳ ಕಠಿಣ ಶಿಕ್ಷೆಯು ವಿಧಿಸಲ್ಪಟ್ಟಿತು. ಅವನನ್ನು ಕರೆದುಕೊಂಡು ಹೋಗಿ ಕಾರಾಗೃಹದಲ್ಲಿ ಕೂಡಿದರು. ಪುರುಷ ವೇಷಧಾರಿಣಿಯಾದ ಸ್ತ್ರೀಯೊಬ್ಬಳು ಅವನನ್ನು ಬಿಡಿಸಿಕೊಂಡು ಹೋಗುವುದಾಗಿ ಹೇಳಿದ್ದಾಳೆ. ಬರಲಿಲ್ಲ. ಶಿಕ್ಷೆ ವಿಧಿಸಿಬಿಟ್ಟರು. ಜೈಲಿನಲ್ಲಿ ಕೂಡಿಬಿಟ್ಟರು. ಅವಳು ಇನ್ನೆಲ್ಲಿ ಬರುವುದು? ಮೂರು ವರ್ಷಗಳು ಕಳೆಯುವುದುಂಟೆ? ತಾನು ಬಿಡುಗಡೆ ಹೊಂದಿ ಹೊರಗೆ ಹೋಗುವುದುಂಟೆ? ಎಂದು ಯೋಚಿಸುತ್ತಿದ್ದನು.

ಹೀಗಿರುವಾಗ ಕಾವಲುಗಾರನೊಬ್ಬನು ಬಂದು ಷಫರ್ಡ್‌ನನ್ನು ನೋಡಿದನು–"ಅರ್ಜೀಜಾ ಹೇಳಿ ಕಳುಹಿಸಿದ್ದಾಳೆ. ಅರ್ಧರಾತ್ರಿಯ ವೇಳೆಗೆ ಉತ್ತರ ದಿಕ್ಕಿನ ಆ ಮೂಲೆಯ ಬಳಿ ನೀನು ಕಾದಿರಬೇಕೆಂದು ಹೇಳಿದ್ದಾಳೆ. ಅವಳು ಬಂದು ಹಗ್ಗವನ್ನು ಹಾಕುತ್ತಾಳಂತೆ. ಅದನ್ನು ಹಿಡಿದು ನೀನು ಹೊರಗೆ ಹೋಗಬೇಕೆಂದು ತಿಳಿಸಿದ್ದಾಳೆ" ಎಂದು ಹೇಳಿದನು.

ಷಫರ್ಡ್ ಅವನ ಮಾತುಗಳನ್ನು ಕೇಳಿದನು. ಇವನೇಕೆ ಹೀಗೆ ಬಂದು ಹೇಳುತ್ತಿದ್ದಾನೆ. ಇವನಿಗೂ ಅವಳಿಗೂ ಏನು ಸಂಬಂಧ? ಅವಳೇಕೆ ತನ್ನಲ್ಲಿ ಇಷ್ಟೊಂದು ಆಸಕ್ತಿಯನ್ನು ವಹಿಸುತ್ತಿದ್ದಾಳೆ ಎಂದು ಯೋಚಿಸಿದನು. "ನನಗೊಂದು ವಿಷಯವನ್ನು ಹೇಳುತ್ತೀಯಾ?" ಎಂದು ಅವನನ್ನು ಕೇಳಿದನು.

"ಹೇಳು! ನಿನಗೇನು ಹೇಳಬೇಕು?"

"ಅಜೀಜ಼ಾ ಯಾರು?"

"ಅವಳೊಬ್ಬ ಸೂಳೆ."

ಅಜೀಜ಼ಾ ಸೂಳೆ ಎಂಬುದನ್ನು ಕೇಳಿ ಷಫರ್ಡ್ ಚಕಿತನಾದನು. ಕಾವಲುಗಾರನು ನಿಲ್ಲಲಿಲ್ಲ. ಹೆಚ್ಚು ಮಾತನಾಡಲಿಲ್ಲ. ಅವನು ಹೊರಟು ಹೋದನು.

ಕಾನ್ಪುರದ ಕಾರಾಗೃಹದಲ್ಲಿ ಅನೇಕ ಮಂದಿ ಫರಂಗಿಗಳನ್ನು ತಂದು ಕೂಡಿದ್ದರು. ಅವರಿಂದ ಆ ಜೈಲೇ ತುಂಬಿ ಹೋಗಿದ್ದುದರಿಂದ ಅವರು ಗಳನ್ನು ಬೇರೆ ಬೇರೆಯ ಕೋಣೆಗಳಲ್ಲಿ ಕೂಡುತ್ತಿರಲಿಲ್ಲ. ದನಗಳನ್ನು ದೊಡ್ಡಿಯಲ್ಲಿ ಕೂಡುವಂತೆ ಕೂಡಿದ್ದರು. ಸಾಯಂಕಾಲ ಹಾಕಿದ ಊಟ ವನ್ನು ತಿಂದು ಉತ್ತರ ದಿಕ್ಕಿನ ಮೂಲೆಯಲ್ಲಿ ಗೋಡೆಯ ಬಳಿ ಕಲ್ಲೊಂದರ ಮೇಲೆ ಷಫರ್ಡ್ ಕುಳಿತಿದ್ದನು. ಅವನ ಹಾಗೆಯೇ ಗೂಢಚಾರರಾಗಿ ಸಿಕ್ಕಿ ಹಾಕಿಕೊಂಡಿದ್ದವರು ಬಂದು ಅವನೊಂದಿಗೆ ಮಾತನಾಡುತ್ತಾ ಕುಳಿತುಕೊಂಡರು. ತಮ್ಮ ಕಷ್ಟಗಳೆಲ್ಲವನ್ನೂ ಹೇಳಿಕೊಂಡರು. ಷಫರ್ಡ್ ತನಗೂ ಅದೇ ಗತಿಯು ಬಂದಿದೆ ಎಂದು ಅವರೆದುರಿಗೆ ಕೊರಗಿ ದನು. ಹೊರಗೆ ಹೋಗಿರುವ ವೀಲರ್‌ನ ಸೇನೆಯು ವಿಪ್ಲವಕಾರರನ್ನು ಜಯಿಸಿ ನಮ್ಮನ್ನು ಬಿಡಿಸಿಕೊಂಡು ಹೋಗುವುದು ಆಗದ ಕೆಲಸವಾಗಿ ಕಂಡು ಬರುತ್ತದೆ" ಎಂದು ಹೇಳಿದನು.

ಕತ್ತಲು ಕವಿದುಕೊಂಡಿತು. ದೂರದಲ್ಲಿ ಅಲ್ಲೊಂದು ಇಲ್ಲೊಂದು ದೀಪಗಳು ಉರಿಯುತ್ತಿವೆ. ಆದರೂ ಆ ಕತ್ತಲೆಯಲ್ಲಿ ದೀಪಗಳ ಪ್ರಕಾ ಶವೂ ಕಡಿಮೆಯಾಗಿದೆಯೋ ಎಂಬಂತೆ ಅವು ಮ್ಲಾನವಾಗಿವೆ. ಎಲ್ಲೆಲ್ಲಿ ಯೂ ನಿಶ್ಶಬ್ದ. ಪಹರೆಯವರು ದನಿಗೊಡುವ ಗರ್ಭನಿರ್ಭೇದವಾದ

ಶಬ್ದವು ಮಾತ್ರ ಆಗಾಗ ಕೇಳಿ ಬರುತ್ತದೆ. ಸಫರ್ಡ್ ಆ ಕಲ್ಲಿನ ಮೇಲೆ ತಲೆ ಇಟ್ಟು ಮಲಗಿದ್ದಾನೆ. ಆದರೆ ಅವನಿಗೆ ನಿದ್ರೆಯು ಬಂದಿಲ್ಲ. ಅಜೀಜ಼ಾ ಬರುತ್ತಾಳೆಂದು ಕಾಯುತ್ತಿದ್ದಾನೆ.

ಹಾಗೆಯೇ ಎರಡು ಮೂರುಗಂಟೆಗಳ ಹೊತ್ತು ಕಳೆದಿರಬಹುದು. ಗೋಡೆಯ ಆಚೆ ಯಾರೋ ಮೆಲ್ಲನೆ ಶಿಳ್ಳು ಹೊಡೆದಂತೆ ಆಯಿತು. ಸಫರ್ಡ್ ಎದ್ದು ಕುಳಿತು ಕೊಂಡನು. ಅಷ್ಟರಲ್ಲಿ ಹಾವು ಹೊಡೆದಂತೆ ಗೋಡೆಯ ಮೇಟೆ ಏನೋ ಶಬ್ದವಾಯಿತು. ಎದ್ದುನಿಂತು ನೋಡಿದನು. ಒಂದು ದಪ್ಪವಾದ ಹಗ್ಗವು ಗೋಡೆಯ ಮೇಲೆ ನೇತಾಡುತ್ತಾ ಬಿದಿದ್ದಿತು.

ಸಫರ್ಡ್ ಅದನ್ನು ಹಿಡಿದೆಳೆದನು. ಅದು ಬರಲಿಲ್ಲ. ಅತ್ತಕಡೆ ಯಾರೋ ಹಿಡಿದು ಕೊಂಡಿರುವಂತೆ ಅಥವಾ ಕಟ್ಟಿರುವಂತೆ ಕಂಡು ಬಂದಿತು. ಅವನು ಮೆಟ್ಟಲು ಹತ್ತುವಂತೆ ಸುಲಭವಾಗಿ ಅದನ್ನು ಹತ್ತಿ ಗೋಡೆಯ ಮೇಲೆ ಬಂದನು. ಆ ಕತ್ತಲೆಯಲ್ಲಿಯೂ ಕೆಳಗೊಂದು ವ್ಯಕ್ತಿಯು ನಿಂತಿರುವಂತೆ ಕಂಡು ಬಂದಿತು.

ಅವನು ಗೋಡೆಯ ಮೇಲೆಯೇ ಕುಳಿತುಕೊಂಡನು. ಕೆಳಗಿಳಿಯುವುದು ಹೇಗೆಂದು ಅವನಿಗೆ ಹೊಳೆಯಲಿಲ್ಲ.

ಕೆಳಗಿದ್ದ ವ್ಯಕ್ತಿಯು "ಹೆದರಬೇಡ. ಧುಮುಕು" ಎಂದು ಹೇಳಿತು.

ಸಫರ್ಡ್ ಧೈರ್ಯಮಾಡಿ ಕೆಳಗೆ ಧುಮುಕಿದನು. ಗಂಗಾನದಿಯ ದಡದಲ್ಲಿದ್ದ ಆ ಗೋಡೆಯ ಪಕ್ಕದಲ್ಲಿ ಬೇಕಾದಷ್ಟು ಮರಳಿನ ರಾಶಿಯಿದ್ದಿತು. ಅದರಿಂದ ಅಷ್ಟು ಮೇಲಿನಿಂದ ಧುಮುಕಿದರೂ ಅವನಿಗೆ ನೋವಾಗಲಿಲ್ಲ,

ಕೆಳಗೆ ಧುಮುಕಿದವನು ಸುಧಾರಿಸಿಕೊಂಡು ಮೇಲೆದ್ದು ಅಲ್ಲಿ ನಿಂತಿದ್ದ ವ್ಯಕ್ತಿಯನ್ನು ನೋಡಿದನು. ಆ ವ್ಯಕ್ತಿಯು ಅಜೀಜ಼ಾ. ಅವಳು ಹಿಂದಿನಂತೆ ಪುರುಷವೇಶಧಾರಿಣಿಯಾಗಿರಲಿಲ್ಲ- ಸ್ತ್ರೀವೇಶದಲ್ಲಿಯೇ ಬಂದಿದ್ದಳು.

ಗೋಡೆಯ ಮೇಲಿದ್ದ ಹಗ್ಗವನ್ನು ಎಳೆದು ಹೆಗಲಿನ ಮೇಲೆ ಹಾಕಿಕೊಂಡು, ಪಕ್ಕದಲ್ಲಿದ್ದ ಫರಂಗಿಯೇವನನ್ನು "ಬಾ" ಎಂದು ಮುಂದೆ ನಡೆದಳು. ಅವನೂ ಮಾತನಾಡದೇ ಅವಳ ಹಿಂದೆ ಹೋದನು.

ಸ್ವಲ್ಪದೂರ ಹೋದಮೇಲೆ ಕಾರಾಗೃಹದ ಪರಿಸರವು ಕಳದು ಹೋದ ಮೇಲೆ ಷಫರ್ಡ್ ಮೌನವನ್ನು ಒಡೆದು "ಅಜೀಜ಼ಾ! ನೀನು ಬಹಳ ಧೈರ್ಯಶಾಲಿ! ಆದರೂ ಕಾ಼ಪುರದಲ್ಲಿ ವಿಪ್ಲವವು ಹತ್ತಿ ಉರಿಯುತ್ತಿರುವ ಈ ಸಮಯದಲ್ಲಿ ನೀನು ಇಂತಹ ಸಾಹಸವನ್ನು ಮಾಡಲು ಹೇಗೆ ಮನಸ್ಸು ಮಾಡಿದೆ?" ಎಂದನು.

ಅದಕ್ಕವಳು "ನಾನು ಧೈರ್ಯಮಾಡದೇ ಹೋಗಿದ್ದರೆ ನೀನು ಒಳಗೆ ಕೊಳೆಯಬೇಕಾಗಿರುತ್ತಿತ್ತು. ಫರಂಗಿಯವರನ್ನು ಕತ್ತರಿಸಿಹಾಕಬೇಕೆಂದು ಆಜ್ಞೆಯಾದಾಗ ನಿನ್ನನ್ನೂ ತುಂಡು ಮಾಡಿ ಹಾಕುತ್ತಿದ್ದರು–" ಎಂದಳು.

"ಹೋಗಲಿ! ನನಗೊಂದು ಮಾತು ಹೇಳು. ನೀನು ನನ್ನಲ್ಲಿ ಇಷ್ಟ ಆಸಕ್ತಿ ತೆಗೆದುಕೊಂಡು ಬಿಡಿಸಿದುದೇಕೆ?

ಆ ಮಾತು ಹೇಳಿದಾಗ ಷಫರ್ಡ್ ಏನು ಆಶೆಯನ್ನು ಇಟ್ಟುಕೊಂಡು ಕೇಳಿದನೋ? ಅವಳು ಸರ್ವೇಸಾಧಾರಣವಾಗಿ ಹೇಳಿದಳು. "ನಿನ್ನನ್ನು ನೋಡಿದಾಗಲೇ ನೀನು ಫರಂಗಿಯವನೆಂದು ನನಗೆ ಗೊತ್ತಾಯಿತು. ಅದರಲ್ಲಿಯೂ ನೀನೊಬ್ಬನೇ ದೊಡ್ಡ ಮನುಷ್ಯನಂತೆ ಕಂಡು ಬಂದೆ. ನನಗೇನಾದರೂ ಹಣ ಕೊಡುತ್ತಿಯೆನೋ ಎಂದು ನಿನ್ನನ್ನು ಬಿಡಿಸಿದೆನು"

ಅಪರಿಚಿತಳಾದ ಸ್ತ್ರೀಯು ಏನಾದರೂ ಸಹಾಯ ಮಾಡಿದಾಗ ಪುರುಷನು ಭಾವಿಸುವಂತೆ ಇನ್ನಾವುದೋ ಉತ್ತರವನ್ನು ಕೊಡುತ್ತಾಳೆಂದು ಅವನು ಭಾವನೆ ಮಾಡಿದನೆಂದು ಕಾಣುತ್ತದೆ. ಆದ್ದರಿಂದ ಅಜೀಜ಼ಾಳ ಉತ್ತರದಿಂದ ಅವನಿಗಷ್ಟು ತೃಪ್ತಿಯಾಗಲಿಲ್ಲ.

ಆದರೂ ಅವನಿಗೊಂದು ಆಲೋಚನೆಯು ಹೊಳೆಯಿತು. ಆಗವನು ಹೇಳಿದನು. "ಅಜೀಜ಼ಾ! ನೀನು ನನ್ನ ಜೊತೆಯಲ್ಲಿ ಬಾ, ನಾವು ವೀಲರ್ ಸಾಹೇಬನ ಬಳಿಗೆ ಹೋಗೋಣ. ಈಗ ನೀನು ಮಾಡಿದ ಉಪಕಾರಕ್ಕಾಗಿ ನಿನಗೇನಾದರೂ ಹಣ ಕೊಡಿಸುತ್ತೇನೆ. ಫರಂಗಿಯವರಿಗೆ ಸಹಾಯವಾಗುವ ಕೆಲಸಗಳನ್ನು ಮಾಡುವುದಾದರೆ ಬೇಕಾದಷ್ಟು ಹಣವನ್ನು ಕೊಡಿಸುತ್ತೇನೆ."

ಕೂಡಲೇ ಅಜೀಜ಼ಾ ಆ ಮಾತಿಗೆ ಜವಾಬು ಹೇಳಲಿಲ್ಲ. ಒಂದು ಕ್ಷಣ ತಡದು ಹೇಳಿದಳು. "ಆಗಲಿ! ನಡೆ! ಹೋಗೋಣ."

ಅವರಿಬ್ಬರೂ ಗಂಗಾನದಿಯ ಪಕ್ಕದಲ್ಲಿ ನಡೆದು ಹೋದರು. ಫರಂಗಿಯವರ ರಕ್ಷಣಾ ಕ್ಷೇತ್ರವನ್ನು ಮುತ್ತಲು ವಿಪ್ಲವಕಾರರು ಬೀಡು ಬಿಟ್ಟಿದ್ದ ಪ್ರದೇಶದ ಬಳಿ ಬಂದರು. ವಿಪ್ಲವಕಾರರಿಗೂ ಫರಂಗಿಗಳಿಗೂ ಆ ರಾತ್ರಿ ಯುದ್ಧವು ನಡೆಯುತ್ತಿರಲಿಲ್ಲ. ಯುದ್ಧ ಕ್ಷೇತ್ರವು ಮಲಗಿ ನಿದ್ರಿಸುವಂತೆ ಮೌನವಾಗಿದ್ದಿತು.

ದೂರದಲ್ಲಿ ಗಸ್ತೀ ಚರ್ಯೆಯವರ ಓಡಿಯಾಡುತ್ತಿದ್ದರು. ಇವರಿಬ್ಬರೂ ಅದನ್ನು ಹಾದು ಮುಂದೆ ಹೋದರು. ಹಾಗೇ ಸ್ವಲ್ಪ ದೂರ ನಡೆದು ಹೋದನಂತರ ಫರಂಗೀ ಸೈನ್ಯದ ಪರಿಸರವು ಬಂದಿತು. ಅಲ್ಲಿ ಬಿಳಿಯ ಸೈನ್ಯದ ಕಾವಲುಗಾರರು ಓಡಿಯಾಡುತ್ತಾ ಪಹರೆಯನ್ನು ಕೊಡುತ್ತಿದ್ದರು. ಅಲ್ಲಿ ಹೋದನಂತರ ಷಫರ್ಡ್ ಆಗಲೀ ಅಜೀಜಾ಼ಳಾಗಲೀ ಭಯ ಪಡಬೇಕಾಗಿರಲಿಲ್ಲ. ಅವರುಗಳು ಧೈರ್ಯವಾಗಿ ಮುಂದೆ ಹೋದರು.

ಮಾರನೆಯ ದಿನ ಪ್ರಾತಃಕಾಲ ಅಜೀಜಾ಼ಳಿಗೆ ವೀಲರ್ ಸಾಹೇಬನ ಭೇಟಿಯಾಯಿತು. ಷಫರ್ಡ್ ಅವಳ ಪರಿಚಯವನ್ನು ಫರಂಗೀ ದಳಪತಿಗೆ ಹೇಳಿದನು. ತನಗವಳು ಬಹಳ ಉಪಕಾರ ಮಾಡಿದುದಾಗಿಯೂ ಅಜೀಜಾ಼ಳು ದೊಡ್ಡ ಮನಸ್ಸು ಮಾಡದಿದ್ದರೆ ತಾನು ತಪ್ಪಿಸಿಕೊಂಡು ಬರುವುದು ದುಸಾಧ್ಯವಾಗುತ್ತಿತ್ತೆಂದೂ ಹೇಳಿದನು.

ಈ ವಿಷಯವನ್ನು ಕೇಳಿ ವೀಲರ್ ಸಂತೋಷಪಟ್ಟನು. ಅವಳನ್ನು ಪ್ರಶಂಸೆಮಾಡಿ ಷಹಬಾಸ್ ಗಿರಿಯನ್ನು ಕೊಟ್ಟನು. ನಿನ್ನಂತಹವಳು ಕುಂಪಣಿಯ ಸೇವೆಯನ್ನು ಮಾಡಿದರೆ ಬಹಳ ಮುಂದಕ್ಕೆ ಬರಬಹುದೆಂದು ಸಹ ಹೇಳಿದನು.

"ದಾಸಿಯು ತಮ್ಮ ಸೇವೆಗೆ ಯಾವಾಗಲೂ ಸಿದ್ಧಳಾಗಿದ್ದಾಳೆ. ಇಂದು ವಿಪ್ಲವಕಾರರ ಕೈ ಮೇಲಾಗಿದ್ದರೂ ಮುಂದೆ ಕಾಲಾನುಕ್ರಮದಲ್ಲಿ ಬಿಳಿಯ ದೊರೆಗಳಿಗೇ ಜಯವಾಗುವುದೆಂಬ ಭರವಸೆಯು ನನಗಿದೆ."

"ಈಗ ಕಾ಼ನ್‌ಪುರದಲ್ಲಿ ನೀನೇನು ಮಾಡುತ್ತಾ ಇದ್ದೀಯೆ ?"

"ಯುದ್ಧಕಾಲದಲ್ಲಿ ಸೈನಿಕರಿಗೆ ಹಾಲು ಕೊಡುತ್ತೇನೆ. ಮಿಠಾಯಿ ಹಂಚುತ್ತೇನೆ"

"ಅದೇನು, ನೀನಾ ಕೆಲಸವನ್ನು ಮಾಡುತ್ತಿದ್ದೀ ?"

"ಕಾರ್ಣಪುರದಲ್ಲಿ ವಾಸಮಾಡುವಂತಹವರು ಏನಾದರೂ ಬಂದು ಕೆಲಸವನ್ನು ಮಾಡಲೇ ಬೇಕು. ವಿಪ್ಲವಕಾರರು ಹೇಳಿದ ಕೆಲಸವನ್ನು ಮಾಡದಿದ್ದರೆ ವಿವಿಧವಾಗಿ ಶಿಕ್ಷೆ ಮಾಡುತ್ತಾರೆ. ಕಾರಾಗೃಹದಲ್ಲಿ ಕೂಡುತ್ತಾರೆ. ಆದರಿಂದ ಇಷ್ಟವಿಲ್ಲದಿದ್ದರೂ ಎಷ್ಟೋ ಜನ ವಿಪ್ಲವ ಕಾರರಿಗೆ ಸಹಾಯ ಮಾಡುತ್ತಿದ್ದಾರೆ"

"ಕುಂಪಣಿಯುವರಿಗೆ ಸಹಾಯ ವಾಗುವಂತೆ ನೀನೇನುಮಾಡಬಲ್ಲೆ?

"ಖಾವಿಂದ್! ಏನು ಹೇಳಿದರೂ ಮಾಡುತ್ತೇನೆ. ಈ ಕರ್ನಲ್ ಸಾಹೇಬರನ್ನು ಕಾರಾಗೃಹದಿಂದ ಬಿಡಿಸಿದೆ ಅದಕ್ಕಾಗಿ ಭಕ್ಷಿಸ್ ಕೊಡಿ ಸುತ್ತೇನೆಂದು ಹೇಳಿದರು. ದೊರೆಗಳ ಬಳಿಗೆ ಕರೆದುಕೊಂಡು ಹೋಗು ತ್ತೇನೆ. ಅವರು ಹೇಳಿದ ಕೆಲಸಗಳನ್ನು ಮಾಡಿದರೆ ಹೆಚ್ಚು ಹೆಚ್ಚಾಗಿ ಭಕ್ಷಿಸ್ ಸಿಕ್ಕುತ್ತದೆ ಎಂದು ಹೇಳಿದರು"

"ಅದಕ್ಕೆಲ್ಲಾ ಯೋಚನೆ ಮಾಡಬೇಡ. ನಿನಗೆ ಬೇಕಾದಷ್ಟು ಭಕ್ಷಿಸ್ ಕೊಡುತ್ತೇನೆ"

"ನನಗೆ ಒಂದು ಕೆಲಸವನ್ನು ಕೊಡಿರಿ. ಅನಂತರ ಅದನ್ನು ಹೇಗೆ ಮಾಡುತ್ತೇನೆಯೋ ನೋಡೋಣವಾಗಲಿ"

ಆಗಲಿ! ಅಜೀಜಾ, ನಿನಗೊಂದು ಕೆಲಸವನ್ನು ಹೇಳುತ್ತೇನೆ. ನೀನು ಸೈನಿಕರಿಗೆ ಹಂಚುವ ಹಾಲಿಗೂ ಮಿಠಾಯಿಗೂ ಒಂದು ಔಷಧ ವನ್ನು ಸೇರಿಸಬೇಕು. ನೀನು ಮಾತ್ರವಲ್ಲ. ನಿನ್ನ ಹಾಗೆ ಯಾರು ಯಾರು ಹಂಚುತ್ತಾರೋ,ಅವರು ಕೊಡುವ ಹಾಲು ಮಿಠಾಯಿಗಳಿಗೂ ಸೇರಿಸಬೇಕು. ಇದನ್ನು ನೀನು ಮಾಡಬಲ್ಲೆಯೋ?"

"ಖಂಡಿತವಾಗಿಯೂ ಮಾಡುತ್ತೇನೆ. ಇಂತಹ ಸುಲಭವಾದ ಕೆಲಸವನ್ನು ಮಾಡಲಾರೆನೇ?"

"ಮಾಡು ಬಹಳ ಬಕ್ಷಿಸ್ ಕೊಡಿಸುತ್ತೇನೆ"

"ಖಾವಿಂದ್! ಮಾಫ್ ಮಾಡಬೇಕು. ಆರೀತಿ ಹಂಚುವವಳು ನಾನೊಬ್ಬಳೇ ಅಲ್ಲ. ಅನೇಕರು ಹಂಚುತ್ತಾರೆ. ಅವರಿಗೆಲ್ಲರಿಗೂ ಭಕ್ಷಿಸ್ ಕೊಡಬೇಕು. ಹಾಲು ಕಾಸುವವರಿಗೂ ಮಿಠಾಯಿ ಮಾಡು ವವರಿಗೂ ಕೊಡಬೇಕು. ಆದ್ದರಿಂದ ನಮಗೆಷ್ಟು ಭಕ್ಷಿಸ್ ಕೊಡೋಣ ವಾಗುತ್ತದೆಯೋ ಅದನ್ನು ಹೇಳಬೇಕು. ಹಾಲು ಕಾಸುವವರು, ಮಿಠಾಯಿ

ಮಾಡುವವರನ್ನು ಮಾತ್ರ ಒಳಗೆ ಹಾಕಿಕೊಳ್ಳುತ್ತೇನೆ. ಅಥವಾ ಆಜಾಗ ದಲ್ಲಿ ಕೆಲಸಮಾಡುವ ಯಾರನ್ನಾದರೂ ಒಬ್ಬನನ್ನು ಹಿಡಿದು ಕೆಲಸವನ್ನು ಸಾಧಿಸುತ್ತೇನೆ-ಸಮಯ ಬಂದರೆ ಹಂಚುವವರಿಗೂ ·ಕೊಡುತ್ತೇನೆ-ಆಜ ವಾಬ್ದಾರಿಯು ನನ್ನದು. ಅಂತೂ ಕೆಲಸವನ್ನು ಮಾಡಿ ಮುಗಿಸುತ್ತೇನೆ"

"ಏನು ಬೇಕೆಂದು ನಿನ್ನ ಅಪೇಕ್ಷೆ?"

"ಖಾವಿಂದ್! ಒಂದು ಲಕ್ಷ ರೂಪಾಯಿಗಳ ಭಕ್ಷೀಸ್ ಕೊಡಿಸಬೇಕು"

"ಅಜೀಜ್ಞಾ! ನೀನು ಕೇಳುವಷ್ಟು ಭಕ್ಷೀಸ್ ಕೊಡಿಸಲು ಆಕ್ಷೇಪಣೆ ಏನೂ ಇಲ್ಲ. ಆದರೆ ಈ ಕೆಲಸವನ್ನು ನೀನು ಸಾಧಿಸಲೇಬೇಕು. ಹಣವನ್ನು ತೆಗೆದುಕೊಂಡ ನಂತರ ಒಂದು ವೇಳೆ ನೀನು ಕೆಲಸಮಾಡದೇ ಹೋದರೆ ಗುಂಡು ಹೊಡೆದು ನಿನ್ನನ್ನು ಕೊಲ್ಲಿಸಲಾಗುವುದು. ಕಾಪುರಕ್ಕೆ ·ಹೊರಟು ಹೋದನರತರ ಉಳಿದುಕೊಂಡೆನೆಂದುಕೊಳ್ಳಬೇಡ ನಮ್ಮ ಗೂಢಚಾರರು ಅಲ್ಲಿಗೂ ಬಂದು ನಿನ್ನನ್ನು ಕೊಲ್ಲುವರು"

"ಆ ವಿಷಯದಲ್ಲಿ ತಾವು ಯೋಚಿಸಬೇಕಾಗಿಲ್ಲ. ನೀವು ನನ್ನ ಮೇಲೆ ನಂಬಿಕೆಯಿಡಬಹುದು"

"ನೀನು ಯಾವ ದಿನ ಔಷಧವನ್ನು ಬೆರೆಸಬಲ್ಲೆ?"

ಅಜೀಜ್ಞಾ ಬೆರಳುಗಳನ್ನು ಎಣಿಸಿ ಲೆಕ್ಕ ಮಾಡಿಕೊಂಡು ಹೇಳಿದಳು-"ಹದಿನೆಂಟನೆಯ ತಾರೀಖಿನ ದಿನದ ತಿಂಡಿಯಲ್ಲಿ ಬೆರಸುವಂತೆ ಮಾಡುತ್ತೇನೆ."

"ಸರಿ! ನೀನು ಇಲ್ಲಿಂದ ಹೋಗುವಾಗ ನಿನಗೆ ಹಣವು ಕೊಡಲಾಗುತ್ತದೆ. ನೀನೂ ಷಫರ್ಡ್ ಮಾತನಾಡಿಕೊಳ್ಳಿರಿ. ನಿನಗೆ ಯಾವಾಗ ಬೇಕೋ ಆವಾಗ ಅವನು ನಿನಗೆ ಔಷಧವನ್ನು ಕೊಡಿಸುತ್ತಾನೆ"

## ಪ್ಲಾಸೀಕದನದ ಶತಮಾನೋತ್ಸವ

ನೂರು ವರ್ಷಗಳ ಹಿಂದೆ ಪ್ಲಾಸೀಯಲ್ಲಿ ಯುದ್ಧವಾಗಿದ್ದಿತು. ಆ ಯುದ್ಧಕಾಲದಲ್ಲಿ ಬ್ರಿಟಿಷರ ಸ್ಥಿತಿಯು ಡೋಲಾಯಮಾನವಾಗಿದ್ದಿತು.

ಅದರ ಸೋಲು ಗೆಲುವಗಳ ಮೇಲೆಯೇ ಭಾರತದಲ್ಲಿ ಅವರು ಇರುವುದೂ ಬಿಟ್ಟು ಹೊರಟು ಹೋಗುವುದೂ ಅವಲಂಬಿತವಾಗಿದ್ದಿತು. ಆದರೆ ದೈವ ಯೋಗದಿಂದ ಇಂಗ್ಲಿಷರಿಗೆ ಜಯಲಕ್ಷ್ಮಿಯು ಒಲಿದಳು. ಅವರು ಭಾರತ ದಲ್ಲಿ ಬೇರೂರಿ ನಿಂತರು.

ಕ್ರಿಸ್ತಶತಾಬ್ದದ ಸಾವಿರದ ಏಳುನೂರನೆಯ ಎಂಬತ್ತೈದನೆಯ ವರ್ಷದಲ್ಲಿ ಪ್ಲಾಸಿಯ ಕದನವು ನಡೆಯಿತೆಂಬುದನ್ನು ಚರಿತ್ರೆಯಲ್ಲಿ ವಾಚ ಕರು ವಿಸ್ತಾರವಾಗಿ ಓದಿದ್ದಾರೆ. ಪ್ಲಾಸೀ ಕದನದಲ್ಲಿ ಇಂಗ್ಲೀಷರು ಜಯ ವನ್ನು ಪಡೆದುದು ಜೂನ್ ಇಪ್ಪತ್ತಮೂರನೆಯ ತಾರೀಖು. ಪ್ಲಾಸೀಕದನ ವಾದ ನೂರು ವರ್ಷಗಳು ಕಳದನಂತರವೇ ಭಾರತದಲ್ಲಿ ಮಹಾ ವಿಪ್ಲವವು ಆರಂಭವಾದುದು. ಪುನಃ ನೂರು ವರ್ಷಗಳ ನಂತರ ಅದೇದಿನವು ಪ್ರಾಪ್ತವಾಯಿತು.

ಕಾನ್‌ಪುರದಲ್ಲಿ ಪ್ಲಾಸೀ ಕದನದ ಶತಮಾನೋತ್ಸವವನ್ನು ಬಹಳ ಯಶಸ್ವಿಯಾಗಿ ನಡೆಯಿಸ ಬೇಕೆಂದು ಫರಂಗಿಯವರೂ ವಿಪ್ಲವಕಾರರೂ ಕೃತನಿಶ್ಚಯರಾಗಿದ್ದರು. ಅಂದು ಮಹಾ ಯುದ್ಧವೊಂದನ್ನು ನಡೆಯಿಸ ಬೇಕೆಂದು ಉಭಯ ಪಕ್ಷದವರೂ ತೀರ್ಮಾನ ಮಾಡಿದ್ದರು. ಹಿಂದೆ ಇದೇ ದಿನದಲ್ಲಿ ಇಂಗ್ಲೀಷರು ಜಯವನ್ನು ಪಡೆದು ಭಾರತದಲ್ಲಿ ನೆಲೆ ಗೊಂಡಂತೆ ಈ ದಿನವೂ ಯುದ್ಧದಲ್ಲಿ ಜಯವನ್ನು ಪಡೆದು ವಿಪ್ಲವಕಾರ ರನ್ನು ಮಟ್ಟ ಹಾಕಿಬಿಡಬೇಕೆಂದು ಫರಂಗೀಯವರು ಮನಸ್ಸು ಮಾಡಿ ದ್ದರು. ವಿಪ್ಲವಕಾರರು ಈದಿನವನ್ನು ಬಹಳ ಪ್ರಶಸ್ತವಾದುದೆಂದು ಬಗೆ ದಿದ್ದರು. ಬ್ರಿಟಿಷರು ಭಾರತದಲ್ಲಿ ಬೇರೂರಿದ ನೂರನೆಯ ವರ್ಷ ಅವರ ರಾಜ್ಯವು ನಾಶವಾಗುವುದೆಂದು ಅವರಿಗೆ ಬಲವಾದ ನಂಬಿಕೆಯಿದ್ದಿತು. ಆ ದಿನ ಧೀರೋದಾತ್ತವಾಗಿ ಯುದ್ಧವನ್ನು ಮಾಡಿ ಫರಂಗಿಗಳನ್ನು ಜಯಿಸ ಬೇಕೆಂದು ವಿಪ್ಲವಕಾರರು ಆಲೋಚಿಸಿದ್ದರು. ಆದಿನವೇ ಫರಂಗಿಗಳ ರಕ್ಷಣಾ ಶ್ರೇಣಿಯನ್ನು ಒಡೆದು, ಅವರ ಸೈನ್ಯಗಳನ್ನು ಘಾತಿಸಿ ಕಾನ್‌ಪುರ ದಲ್ಲಿ ಫರಂಗಿಗಳ ಸೊಲ್ಲಿಲ್ಲದಂತೆ ಮಾಡಿ ಪ್ಲಾಸೀ ಕದನದ ಶತಮಾನೋ ತ್ಸವವನ್ನು ನೆರವೇರಿಸಬೇಕೆಂದು ಅವರು ಸಂಕಲ್ಪ ಮಾಡಿದರು.

ಫರಂಗಿಗಳಿಗೂ ವಿಪ್ಲವಕಾರರಿಗೂ ಖಡಾಖಡಿಯಾಗಿ ಕಾನ್‌ಪುರ ದಲ್ಲಿ ನಡೆದ ಈ ಯುದ್ಧವು ಆರಂಭವಾಗುವ ವೇಳೆಗೆ ಮಧ್ಯಾಹ್ನವಾಗಿ

ಹೋಗಿತ್ತು. ಬಹಳ ಹೊತ್ತು ಯುದ್ಧವು ನಡೆಯಿತು. ಉಭಯ ಪಕ್ಷದ ವರೂ ವೀರಾವೇಶದಿಂದ ಹೋರಾಡುತ್ತಿದ್ದರು. ಜಯಾಪಜಯಗಳನ್ನು ಕುರಿತು ನಿರ್ಣಯಿಸುವದೇ ಬಹಳ ಕಷ್ಟವಾಗಿದ್ದಿತು.

ಸಾಯಂಕಾಲವಾಗುತ್ತಾ ಬಂದಿತು. ಆಕಾಶದಲ್ಲಿ ಅಲ್ಲಲ್ಲಿ ನಕ್ಷತ್ರಗಳು ಉದಯಿಸಲಾರಂಭವಾದವು. ಅದೇನು ನಿಶಾದೇವಿಯು ತನ್ನ ಕರಿಯ ಬಣ್ಣದ ಸೀರೆಯ ಸೆರಗಿನಿಂದ ಜಗತ್ತನ್ನು ಮುಚ್ಚಲು ಪ್ರಯತ್ನಮಾಡು ತ್ತಿದ್ದಳೋ, ಅಥವಾ ತೋಪುಗಳು ಮತ್ತು ಗುಂಡುಗಳು ಹಾರಿದುದ ರಿಂದ ಉಂಟಾದ ಹೊಗೆಯು ಆವರಿಸಿದ್ದಿತೋ,ಅಂತೂ ಆ ಯುದ್ಧ ಕ್ಷೇತ್ರ ದಲ್ಲಿ ಕಣ್ಣು ಕಾಣಿಸಲಾದಷ್ಟು ಅಂಧಕಾರವುಂಟಾಯಿತು. ವಿಪ್ಲವ ಕಾರರು ಆದಷ್ಟು ಬೇಗ ಅಂದಿನ ಯುದ್ಧವನ್ನು ಮುಗಿಸಿ ಜಯಲಕ್ಷ್ಮಿಯನ್ನು ಒಲಿಸಿಕೊಂಡು ಹೊರಟುಹೋಗಲು ಪ್ರಯತ್ನಮಾಡುತ್ತಿದ್ದರು. ಆದರೆ ಪ್ರತಿಯೊಬ್ಬ ಫರಂಗೀ ಸೈನಿಕನೂ ಪ್ಲಾಸೀ ವೀರನಾದ ಕ್ಲೈವ್‌ನಂತೆ ನಿಂತು ಹೋರುತ್ತಿದ್ದುದರಿಂದ ವಿಪ್ಲವಕಾರರ ಮನೋರಥವು ಕೂಡಲೇ ಕೈಮಾಡಲಿಲ್ಲ.

ರಕ್ಷಣಾಶ್ರೇಣಿಯ ದಕ್ಷಿಣ ಭಾಗದಲ್ಲಿ ಪೂರ್ಣವಾಗಿ ಗೋಡೆಯನ್ನು ಎಬ್ಬಿಸಿರಲಿಲ್ಲ. ಇದ್ದ ಗೋಡೆಯೂ ವಿಪ್ಲವಕಾರರ ತೋಪುಗಳ ಹೊಡ ತಕ್ಕೆ ಸಿಕ್ಕಿ ಗಳಿತವಾಗಿದ್ದಿತು. ಸುತ್ತಲೂ ಯುದ್ಧಮಾಡುತ್ತಿದ್ದ ವಿಪ್ಲವ ಕಾರರಲ್ಲಿ ಕೆಲವು ಮಂದಿ ವೀರರನ್ನು ಸೇರಿಸಿಕೊಂಡು ಗುಲಾಮಾಲಿಯು ಆ ಪ್ರದೇಶದಲ್ಲಿ ಮುತ್ತಿಗೆ ಹಾಕಲು ಪ್ರಯತ್ನಮಾಡಿದನು. ಅಲ್ಲಿ ಕ್ಯಾಪ್ಟನ್ ಜೇಕಿನ್ಸ್‌ನ ಅಧೀನದಲ್ಲಿ ಫರಂಗಿಯವರು ನಿಂತು ಹೋರಾಡುತ್ತಿದ್ದರು. ಅವರ ಮೇಲೆ ತೋಪುಗಳನ್ನೂ ಗುಂಡುಗಳನ್ನೂ ಹಾರಿಸಲಾಯಿತು. ಅವರು ಬಗ್ಗಲಿಲ್ಲ. ಅಲ್ಲಿಂದ ಚಲಿಸಲಿಲ್ಲ. ನಿರಾಶರಾದ ಆ ಫರಂಗೀ ಸೈನಿಕರು ಕಡೆಗಾಲದಲ್ಲಿ ಕಬ್ಬಿಣದ ಗೊಂಬೆಗಳಂತೆ ನಿಂತು ಪ್ರತಿರೋಧ ಮಾಡುತ್ತಿದ್ದರು.

ಅನಂತರ ವಿಪ್ಲವಕಾರರು ಅವರ ಮೇಲೆ ತೋಪುಗಳನ್ನು ಹಾರಿಸ ಲಿಲ್ಲ. ಆ ಬಗೆಯು ಯುದವು ವ್ಯರ್ಥವೆಂದು ಅವರು ಬಗೆದರು. ಅಲ್ಲೊಂದು ಕಡೆ ರಕ್ಷಣಾ ಶ್ರೇಣಿಯ ಗೋಡೆಯು ಪೂರ್ಣವಾಗಿ ಭಗ್ನ ವಾಗಿ ಹೋಗಿದ್ದಿತು. ವಿಪ್ಲವಕಾರರು ಮುಗ್ಗಧಂತೆ ಬಂದೂಕುಗಳನ್ನು

ಹಿಡಿದು ಶತ್ರು ಸೈನಿಕರಲ್ಲಿ ಬಲವಾದ ಕಾವಲು ಕೊಡುತ್ತಾ ನಿಂತಿದ್ದರು. ಅವರು ಕದಲುವಂತೆ ತೋರಲಿಲ್ಲ. ಮುಂದೆ ನುಗ್ಗಿ, ಅವರನ್ನು ಮುತ್ತಿ, ಕೈ ಕೈ ಯುದ್ಧಮಾಡಿ, ರಕ್ಷಣಾ ಶ್ರೇಣಿಯನ್ನು ಪ್ರವೇಶಮಾಡಬೇಕೆಂದು ಗುಲಾಮಾಲಿಯು ಆಲೋಚನೆಯನ್ನು ಮಾಡಿದನು.

ಅವನು ಜೊತೆಯಲ್ಲಿದ್ದ ವೀರರಿಗೂ ಅದು ಸರಿಯಾಗಿ ತೋರಿತು. ಕೂಡಲೇ ಕೆಲವು ಹತ್ತಿಯ ಮೂಟೆಗಳನ್ನು ತರಿಸಿದರು. ಅವುಗಳ ಹಿಂದೆ ರಕ್ಷಣೆಯನ್ನು ಪಡೆಯುತ್ತಾ,ಅವುಗಳನ್ನು ಉರುಳಿಸುತ್ತಾ, ವಿಪ್ಲವಕಾರರು ಮುಂದೆ ಮುಂದೆ ಹೋದರು. ಫರಂಗೀ ಸೈನಿಕರು ಇವರ ಮೇಲೆ ಅಗ್ನಿ ವರ್ಷವನ್ನೇ ಮಾಡಲಾರಂಭಿಸಿದರು. ಆದರೆ ಈ ವೀರರು ಹೆದರದೇ ಹಿಂದೇಟು ಹೊಡೆಯದೇ ಹಾಗೆಯೇ,ಮುಂದುವರಿದರು.

ಗೋಡೆಯು ಇನ್ನೂ ಹದಿನೈದು ಗಜಗಳಷ್ಟು ದೂರವಿರಬಹುದು. ಇನ್ನು ಹತ್ತೀ ಮೂಟೆಗಳ ರಕ್ಷಣೆಯು ಅನಾವಶ್ಯಕ. ವಿಪ್ಲವದ ಆ ವೀರರು ಬಂದೂಕುಗಳನ್ನು ಹಿಡಿದುಕೊಂಡು ಮುಂದೆ ನುಗ್ಗಿದರು. ಮಹಾಧನು ರ್ಧಾರಿಯು ಬಿಟ್ಟ ವೇಗವಾದ ಬಾಣಗಳಂತೆ ಅವರು ಮುಂದೆ ನುಗ್ಗಿದರು. ವಿಧಿಯಿಲ್ಲದೇ ಬಂದು ಫರಂಗೀ ಸೈನಿಕರು ಅವರಿಗೆ ಯುದ್ಧವನ್ನು ಕೊಡಬೇಕಾಗಿ ಬಂದಿತು. ಅವರು ನೂರಾರು ಸಂಖ್ಯೆಯಲ್ಲಿ ಬಂದು ವಿಪ್ಲವದ ವೀರರನ್ನು ಸುತ್ತುಗಟ್ಟಿದರು. ಸ್ವಲ್ಪ ಹೊತ್ತು ಹಾಗೂ ಹೋರಾಟವು ನಡೆಯಿತು. ದೂರದಲ್ಲಿದ್ದ ವಿಪ್ಲವದ ಸೈನ್ಯವು ಕೂಡಲೇ ಬಂದು ಇವರಿಗೆ ಸಹಾಯ ಮಾಡಲಾಗಲಿಲ್ಲ. ವಿಪ್ಲವಕಾರರ ಕೈ ಕೆಳ ಗಾಗುತ್ತ ಬಂದಿತು. ಗುಲಾಮಾಲಿಯು ಕೆಳಗೆ ಬಿದ್ದನು. ಮುಂದೆ ನುಗ್ಗಿದವರಲ್ಲಿ ಕೆಲವರು ಹಿಮ್ಮೆಟ್ಟಿದರು. ಅಂದಿನ ದಿನದ ಹೋರಾಟದಲ್ಲಿ ಜಯವೆಂಬುದು ಕಂಡುದು ಅಲ್ಲೇ, ಅದೂ ಫರಂಗಿಗಳಿಗೆ.

ವಿಪ್ಲವದ ಸೈನ್ಯಗಳು ಅಲ್ಲಿಗೆ ನೂರೈವತ್ತು ಇನ್ನೂರು ಗಜಗಳ ಹಿಂದಿದ್ದವು. ಅವರು ತಮಗೆ ಅಂದು ಉಂಟಾದ ಅಪಜಯದಿಂದ ಕ್ರುದ್ಧ ರಾಗಿದ್ದರು. ಏನುಮಾಡುವುದೆಂಬುದೇ ಅವರಿಗೆ ಹೊಳೆಯಲಿಲ್ಲ. ಸಾಹಸ ಮಾಡಿ ಮುಂದೆ ನುಗ್ಗಿದಂತಹ ಗುಲಾಮಾಲಿಯು ವಿಫಲಮನೋರಥ ನಾಗಿದ್ದನು.

ವಿಪ್ಲವದ ವೀರರು ಉರುಳಿಸಿಕೊಂಡು ಬಂದಿದ್ದ ಹತ್ತೀಮೂಟೆಗಳನ್ನು ಫರಂಗೀ ಸೈನಿಕರು ಎತ್ತಿ ಒಡೆದು ಹೋಗಿದ್ದ ಗೋಡೆಯ ಬಳಿ ಮರೆಯಾಗಿಡುತ್ತಿದ್ದರು.

ಕ್ಯಾಪ್ಟರ್ ಜೇಕಿನ್ಸ್ ತನ್ನ ಸೈನಿಕರಿಗಾದ ಜಯದಿಂದ ಅಪರಿಮಿತಾನಂದ ಭರಿತನಾಗಿ ಹೊರಗೆ ಬಂದನು. "ಇಂದಿನ ಯುದ್ದವು ನಮ್ಮದು. ಪ್ಲಾಸೀ ಕದನದ ಶತಮಾನೋತ್ಸವದಲ್ಲಿ ಜಯಶೀಲರಾದವರು ನಾವು" ಎಂದು ಕೂಗಿ ಹೇಳಿದನು. ಅವನ ಸೈನಿಕರು ದೂರಕ್ಕೆ ಕೇಳಿಬರುವಂತೆ ಜಯಕಾರಗಳನ್ನು ಮಾಡಿದರು. ಆದರೆ ಈ ಸಮಯದಲ್ಲಿ ಒಂದು ಅಘಟನ ಘಟನಾವಳಿಯು ನಡೆಯಿತು. ಜೇಕಿನ್ಸ್ ನಿಂತಿದ್ದ ಕಡೆ ಅನೇಕ ಮಂದಿ ವಿಪ್ಲವದ ವೀರರು ಮೃತರಾಗಿ ಬಿದ್ದಿದ್ದರು. ಅಲ್ಲಿ ಬಿದ್ದಿದ್ದ ದೇಹಗಳಲ್ಲೊಂದರಲ್ಲಿ ಜೀವವಿದ್ದಿತೆಂದು ಕಾಣುತ್ತದೆ. ಅದು ಪಕ್ಕದಲ್ಲಿದ್ದ ಬಂದೂಕೊಂದನ್ನು ಮೇಲೆತ್ತಿ ಜೇಕಿನ್ಸ್‌ನ ಕಡೆಗೆ ಗುರಿಮಾಡಿ ಗುಂಡು ಹಾರಿಸಿತು. ಆ ಪೆಟ್ಟು ತಲೆಗೆ ತಗುಲಿ ಅವನು ಗತಪ್ರಾಣನಾಗಿ ಬಿದ್ದನು. ಅವನ ಸೈನಿಕರು ಬಂದು ಗುಂಡು ಹಾರಿಸಿದವನಾರೆಂದು ನೋಡಿದರು. ಅವನೊಬ್ಬ ಒಂಟಿಗಣ್ಣಿನ ವೃದ್ಧ ಸೈನಿಕ.

ಒಂಟಿಗಣ್ಣಿನ ವೃದ್ಧ ಸೈನಿಕನೊಬ್ಬನು ಕ್ಯಾಪ್ಟರ್ ಜೆಕಿನ್ಸ್‌ನನ್ನು ಹೊಡೆದು ಕೊಂದು ಹಾಕಿದ ವರ್ತಮಾನವು ವಿಪ್ಲವದ ಸೈನ್ಯದಲ್ಲಿಯೂ ಹರಡಿತು. ಅವನು ಸಾಹಸವನ್ನು ಎಲ್ಲರೂ ಕೊಂಡಾಡಿದರು. ಅವನ ಸಾಹಸದಿಂದ ಎಲ್ಲರೂ ಉತ್ಸಾಹಿತರಾದರು. ಆ ವರ್ತಮಾನವು ಬಂದ ನಂತರ ವಿಪ್ಲವ ಸೈನ್ಯದಲ್ಲಿ ವಿದ್ಯುತ್ಸಂಚಾರವಾದಂತಾಗಿ ದ್ವಿಗುಣಿತ ಶೌರ್ಯದಿಂದ ಅವರು ಯುದ್ಧಕಾರ್ಯವನ್ನು ಆರಂಭಮಾಡಿದರ .

ಅರ್ಧರಾತ್ರಿಯ ಸಮಯವಾಯಿತು. ಇನ್ನೂ ಯುದ್ಧವು ನಡೆಯುತ್ತಲೇ ಇದ್ದಿತು. ವಿಪ್ಲವಕಾರರು ಕರೀಮಾಲಿಯು ಕಂಡು ಹಿಡಿದಿದ್ದ ಹೊಸ ಬಗೆಯ ತೋಪುಗಳನ್ನು ಅಂದಿನ ಯುದ್ಧದಲ್ಲಿ ಉಪಯೋಗಿಸುತ್ತಿದ್ದರು. ಆ ತೋಪುಗಳು ಪುಟ ಹೊಡೆದ ಚೆಂಡುಗಳಂತೆ ಶತ್ರು ಸೈನ್ಯದ ಮೇಲೆ ಹಾರುತ್ತಿದ್ದವು. ಬಾಲವುಳ್ಳ ಧೂಮಕೇತುಗಳಂತೆ ಅವು ಬೆಂಕಿಯನ್ನು ಕಾರುತ್ತಾ ಶತ್ರುಸೈನ್ಯ ಮಧ್ಯದಲ್ಲಿ ಬೀಳುತ್ತಿದ್ದವು. ಪ್ರಳಯ ಕಾಲದಲ್ಲಿ ಸೂರ್ಯ ಚಂದ್ರರೂ,ನಕ್ಷತ್ರಗಳೂ ದಿಕ್ಕೆಟ್ಟು ಸಿಕ್ಕಿದ ಕಡೆಗೆ

ಹಾರುತ್ತಿರುವಂತೆ ಆಕಾಶದಲ್ಲಿ ಎಲ್ಲಿ ನೋಡಿದರೂ ಅಗ್ನಿ ಗೋಳಗಳೇ ಹಾರಾಡುತ್ತಿದ್ದ ಆ ರಾತ್ರಿಯು ಭಯಂಕರವಾಗಿದ್ದಿತು.

ಇಂತಹ ಸನ್ನಿವೇಶಗಳಲ್ಲಿ ಯುದ್ಧ ಕ್ಷೇತ್ರಕ್ಕೆ ಸ್ವಲ್ಪದೂರದಲ್ಲಿ ಹತ್ತು ಹನ್ನೆರಡು ಮಂದಿ ಅಶ್ವಾರೋಹಿಗಳು ಫರಂಗೀ ರಕ್ಷಣಾ ಶ್ರೇಣಿಯ ಕಡೆಗೆ ಹೋಗುತ್ತಿದ್ದರು. ಶ್ರೇಣಿಯ ಹೊರವಳಯದಲ್ಲಿ ಕಾವಲು ಗಾರರನ್ನು ನೋಡುತ್ತಲೇ ಅವರು ಕುದುರೆಗಳನ್ನು ನಿಲ್ಲಿಸಿದರು. ಅಶ್ವಾ ರೋಹಿಗಳಲ್ಲಿ ಮುಖ್ಯಸ್ಥನಂತಿದ್ದ ನವಯುವಕನೊಬ್ಬನು ಕುದುರೆ ಯನ್ನು ಸ್ವಲ್ಪ ಮುಂದೆ ಬಿಟ್ಟು, ಪರವಾನಗಿಯನ್ನು ತೋರಿಸಿದನು.

ಕಾವಲುಗಾರನು–"ಇದು ಕೇವಲ ಒಬ್ಬರಿಗಾಗಿ ಕೊಡಲಾದ ಪರ ವಾನಗಿ. ನೀವಿಷ್ಟು ಜನಗಳೂ ಒಳಗೆ ಹೋಗಲಾಗುವುದಿಲ್ಲ" ಎಂದನು.

ನವಯುವಕನು ಕೇಳಿದನು. "ಕಾವಲುಗಾರರೇ! ಪರವಾನಗಿ ಯಿಲ್ಲದೇ ಇಷ್ಟು ದೂರ ಬಂದವರನ್ನು ನೀವೇನು ಮಾಡುತ್ತೀರಿ?"

ಕಾವಲುಗಾರನು ಹೇಳಿದನು. "ದಸ್ತಗಿರಿಮಾಡಿ ನಮ್ಮ ಸೇನಾಧಿ ಪತಿಗಳ ಬಳಿಗೆ ಕರೆದುಕೊಂಡು ಹೋಗುತ್ತೇವೆ"

"ನಮಗೀಗ ಬೇಕಾದುದೂ ಅಷ್ಟೇ! ನಡಿ, ನಾವೆಲ್ಲರೂ ನಿನ್ನ ಹಿಂದೆ ಬರುತ್ತೇವೆ."

ಆ ಮಾತು ನಿಜವಾಗಿಯೂ ಸರಿಯಾಗಿದ್ದಿತು. ಯುದ್ಧಕಾಲದಲ್ಲಿ ಶತ್ರು ಪಕ್ಷದವರಲ್ಲಿ ಎಲ್ಲೋ ಕೆಲವು ಮಂದಿ ನಿಶ್ಯಸ್ತ್ರರಾಗಿ ಬಂದಾಗ ಯುದ್ಧಮಗ್ನರಾಗಿರುವ ಕಾವಲುಗಾರರೇನು ಮಾಡಬೇಕು? ಅವರು ಅಶ್ವಾರೋಹಿಗಳನ್ನು ಕರೆದುಕೊಂಡು ಹೋಗಲು ಒಪ್ಪಿದರು. ಬಂದವ ರಿಗೂ ಅದೇ ಬೇಕಾಗಿದ್ದಿತು. ಇಬ್ಬರು ಫರಂಗೀ ಸೈನಿಕರು ಅವರನ್ನು ರಕ್ಷಣಾ ಶ್ರೇಣಿಯೊಳಗೆ ಕರೆದುಕೊಂಡು ಹೋದರು. ಹೀಗೆ ಇವರುಗಳು ವೀಲರ್ ಸಾಹೇಬನಿದ್ದ ಕೋಣೆಯ ಬಾಗಿಲಿನವರೆಗೆ ಹೋಗುತ್ತಲೇ ಫರಂಗೀ ಸೈನಿಕರಲ್ಲೊಬ್ಬನು "ನೀವುಗಳು ಇಲ್ಲಿಯೇ ನಿಂತುಕೊಳ್ಳಿರಿ. ಕಮಾಂಡರರ ಅಪ್ಪಣೆ ಏನಾಗುವುದೋ ನೋಡಿಕೊಂಡು ಬರುತ್ತೇನೆ" ಎಂದು ಹೇಳಿದನು.

ಅನಂತರ ಒಳಗೆ ಹೋಗಿ, ಪುನಃ ವಾಪ್ಸು ಬಂದು, ಅವನು "ನಿಮ್ಮನ್ನು ಒಳಗೆ ಕರೆದುಕೊಂಡು ಬರಬೇಕೆಂಬುದಾಗಿ ಅಪ್ಪಣೆಯಾ

ಗಿದೆ" ಎಂದನು. ಮೊದಲು ಕಾವಲುಗಾರರಿಗೆ ಪರವಾನಗಿಯನ್ನು ತೋರಿಸಿದ ಆ ಅಶ್ವಾರೋಹಿಗಳ ಮುಖ್ಯಸ್ಥನು ಫರಂಗೀ ಸೈನಿಕನ ಹಿಂದೆ ವೀಲರ್ ಸಾಹೇಬನ ಕೋಣೆಯನ್ನು ಪ್ರವೇಶಮಾಡಿದನು.

ಆ ಕೋಣೆಯಲ್ಲಿ ವೀಲರ್ ಸಾಹೇಬನು ಮಂಚವೊಂದರ ಮೇಲೆ ಮಲಗಿದ್ದನು. ಆ ರಾತ್ರಿ ಪುನಃ ಯುದ್ಧವು ಆರಂಭವಾದಾಗ ಅವನಿಗೆ ಗುಂಡಿನ ಪೆಟ್ಟು ತಗುಲಿ ಗತ ಪ್ರಾಣನಂತೆ ನರಳುತ್ತಿದ್ದನು. ಅವನ ಹೆಂಡತಿ ಮಕ್ಕಳು, ತಂಗಿ ಮುಂತಾದವರು ಕುಳಿತು ಗೋಳಿಡುತ್ತಿದ್ದರು.

ಅಂತಹ ಸ್ಥಿತಿಯಲ್ಲಿಯೂ ವೀಲರನಿಗೆ ಜ್ಞಾನವು ಸರಿಯಾಗಿಯೇ ಇದ್ದಿತೆಂದು ಹೇಳಬೇಕು. ಫರಂಗೀ ಸೈನಿಕನೊಡನೆ ಪ್ರವೇಶ ಮಾಡಿದ ಆಗಂತುಕನು ಹಾಸಿಗೆಯ ಬಳಿ ಬಂದು ನಿಲ್ಲುತ್ತಲೇ ಆ ವ್ಯಕ್ತಿಯು ಯಾರೆಂದು ವೀಲರನಿಗೆ ಗೊತ್ತಾಯಿತು. ಬಂದಿರುವುದು ಅಜೀಜ್ಞಾಳೆಂದು ತಿಳಿಯಿತು.

ಅಜೀಜ್ಞಾಳ ಆಗಮನದಿಂದ ವೀಲರ್ ಸಾಹೇಬನಿಗೆ ಆ ಯಾತನೆಯಲ್ಲಿಯೂ ಒಂದು ಬಗೆಯ ಸುಖವಾದಂತೆ ಆಯಿತು. ಅವಳನ್ನು ನೋಡುತ್ತಲೇ ಅವನು ನಗುಮುಖ ಮಾಡಿದನು. ಮೇಲೆದ್ದು ಕುಳಿತುಕೊಳ್ಳಲು ಪ್ರಯತ್ನಮಾಡಿದನು. ಬಹಳ ಉತ್ಸಾಹಗೊಂಡವನಂತೆ ಕಂಡನು.

ಅವಳೇ ಮಾತನಾಡುವುದಕ್ಕಾಗಿ ವೀಲರ್ ಕಾಯಲಿಲ್ಲ. ಆತುರದಿಂದ "ಅಜೀಜ್ಞಾ! ನಿನ್ನ ಕೆಲಸವಾಯಿತೇ?" ಎಂದು ಕೇಳಿದನು.

ಅವಳು "ಆಯಿತು, ಕಮಾಂಡರ್‌ಸಾಬ್" ಎಂದು ಹೇಳಿದಳು. ಪುನಃ "ಹಾಲು ಮತ್ತು ಮಿಠಾಯಿಗಳಿಗೆ ನೀವು ಕೊಟ್ಟ ಔಷಧವನ್ನು ಹಾಕಿ ಬಿಟ್ಟಿದ್ದೇವೆ. ಆ ಪದಾರ್ಥಗಳು ಈಗ ಯುದ್ಧ ಕ್ಷೇತ್ರದಲ್ಲಿ ಹಂಚಲ್ಪಡುತ್ತಾ ಇವೆ. ಇನ್ನು ಸ್ವಲ್ಪ ಹೊತ್ತಿನಲ್ಲಿ ಸಹಸ್ರಾರು ಜನ ಸೈನಿಕರು ನಿದ್ರಾಸಕ್ತರಾಗುತ್ತಾರೆ. ಆ ನಿದ್ರೆಯು ಅವರ ದೀರ್ಘ ನಿದ್ರೆಯಾಗುತ್ತದೆ. ಹಾಗಾದನಂತರ ಎಲ್ಲಿ ಸಿಕ್ಕಿ ಬೀಳುತ್ತೇನೆಯೋ ಎಂದು ನಾನು ಇಲ್ಲಿಗೆ ಬಂದು ಬಿಟ್ಟಿದ್ದೇನೆ. ಈ ಕೆಲಸದಲ್ಲಿ ನನಗೆ ಸಹಾಯಮಾಡಿದ ಹತ್ತು ಹನ್ನೆರಡು ಮಂದಿಯೂ ಸಹ ನನ್ನೊಡನೆ ಬಂದು ಬಿಟ್ಟಿದ್ದಾರೆ" ಎಂದಳು.

"ಹಾಗಾದರೆ ಶತ್ರು ಪಕ್ಷದಲ್ಲಿ ಸಹಸ್ರಾರು ಜನ ಹುಳುಗಳಂತೆ ನಾಶವಾದ ವರ್ತಮಾನವನ್ನು ನಾನು ಈ ರಾತ್ರಿ ಕೇಳುತ್ತೇನೆಯೇ? ಅಜೀಜ್ಞಾ!"

"ಖಂಡಿತವಾಗಿಯೂ ಕೇಳುತ್ತೀರಿ. ಅದಕ್ಕೆ ಬೇಕಾದರೆ ನನ್ನ ಪ್ರಾಣವನ್ನೇ ಪಣವಾಗಿಡುತ್ತೇನೆ."

ಆ ಮಾತು ಕೇಳಿ ವೀಲರನಿಗೆ ಬಹಳ ತೃಪ್ತಿಯಾಯಿತು. ಒಂದು ಬಾರಿ ಅವನು ವಿಕಟವಾಗಿ ನಕ್ಕನು. ಆ ನಗುವಿನಲ್ಲಿ ಪ್ರತೀಕಾರ ಮಾಡಿದ ಅಟ್ಟಹಾಸವಿದ್ದಿತು. ಶತ್ರುಗಳನ್ನು ಜಯಿಸಿದ ಆನಂದವಿದ್ದಿತು. ಕಾನ್ಪುರದಲ್ಲಿ ತಾನು ಉಳಿದುಕೊಂಡೆನೆಂಬ ಉತ್ಸಾಹವಿದ್ದಿತು. ಬಹಳ ಪರಿಶ್ರಮದಿಂದ ತನ್ನ ಕೈಯನ್ನು ಮೇಲೆತ್ತಿ ಮಂಚದ ಪಕ್ಕದಲ್ಲಿ ನೆಲದ ಮೇಲೆ ಕುಳಿತು ಮಾತನಾಡುತ್ತಿದ್ದ ಅಜೀಜ್ಞಾಳ ಬೆನ್ನು ತಟ್ಟಿ "ಷಹ ಬಾಸ್" ಎಂದು ಹೇಳಿದನು.

ಕಡೆಗೆ ಅಜೀಜ್ಞಾಳು ಹೊರಗಡೆ ಹೋಗುವುದಕ್ಕೆ ಅನುವಾದಳು. ವೀಲರ್‌ಸಾಹೇಬನ ಕಡೆಗೆ ನೋಡಿದಳು. ಆ ದೃಷ್ಟಿಯಲ್ಲಿ ನಾವೆಲ್ಲಿರುವುದು-ಎಂಬ ಪ್ರಶ್ನೆಯಿದ್ದಿತು. ಅದನ್ನು ತಿಳಿದುಕೊಂಡ ಫರಂಗೀ ದಳಪತಿಯು "ಈ ರಾತ್ರಿಯನ್ನು ಹೊರಗಿನ ಜಗುಲಿಯ ಮೇಲೆ ಕಳೆಯಿರಿ. ನಾಳೆಯು ಪಾತಃಕಾಲ ನಿಮಗೆ ಬೇರೆ ಒಂದು ಸ್ಥಳವನ್ನು ಏರ್ಪಾಡು ಮಾಡುತ್ತೇನೆ." ಎಂದನು.

ಅಜೀಜ್ಞಾಳಿಗೂ ಅವಳ ಸಹೋದ್ಯೋಗಿಗಳಿಗೂ ನಿದ್ದೆಯು ಬರಲಿಲ್ಲ. ಅವರು ವಿಶ್ರಾಂತಿಯನ್ನೂ ಪಡೆಯಲಿಲ್ಲ. ಹೊರಗಡೆ ಬಂದು ಆ ರಕ್ಷಣಾ ಶ್ರೇಣಿಯಲ್ಲಿ ಓಡಿಯಾಡಲಾರಂಭಿಸಿದರು. ಅರ್ಧರಾತ್ರಿಯು ಕಳೆದಿದ್ದಿತು. ಆದರೂ ಯುದ್ಧವು ಮುಗಿದಿರಲಿಲ್ಲ. ರಕ್ಷಣಾ ಶ್ರೇಣಿಯನ್ನು ದಾಟಿ ಶತ್ರುಗಳ ತೋಪುಗಳೂ ಗುಂಡುಗಳೂ ಒಳಗೆ ಬಂದು ಬೀಳುತ್ತಿದ್ದವು. ಫರಂಗೀ ಸ್ತ್ರೀಪುರುಷರೆಲ್ಲರೂ ಗೋಡೆಯ ಬಳಿ ನಿಂತು ಯುದ್ಧಮಾಡುತ್ತಿದ್ದ ಸೈನಿಕರಿಗೆ ನೆರವಾಗುತ್ತಿದ್ದರು. ಮುದುಕರೂ, ಹುಡುಗರೂ,ರೋಗಿಗಳೂ, ಗಾಯಗೊಂಡವರೂ ಮಾತ್ರ ಬ್ಯಾರಕ್‌ಗಳಲ್ಲಿದ್ದರು. ಓಡಿಯಾಡುತ್ತಿದ್ದವರೆಂದರೆ ರೋಗಿಗಳನ್ನು ನೋಡಿಕೊಳ್ಳುತ್ತಿದ್ದ

ನರ್ಸ್ ಮತ್ತು ಡಾಕ್ಟರುಗಳು. ಸೈನಿಕರಿಗೆ ಮದ್ದುಗುಂಡುಗಳನ್ನು ಒದಗಿಸುತ್ತಿದ್ದವರು.

ಸುತ್ತಾಡುತ್ತಿದ್ದ ಆ ಆಗಂತಕರುಗಳು ಒಂದು ಕಡೆ ನಿಂತುಕೊಂಡರು. ಎರಡು ನಿಮಿಷಗಳ ಕಾಲ ಏನೋ ಮಾತನಾಡುತ್ತಿದ್ದರು. ಅನಂತರ ಒಬ್ಬೊಬ್ಬರು ಒಂದೊಂದು ಕಡೆ ಹೊರಟು ಹೋದರು.

ಅಜೀಜ್‌ಳೂ ಅವಳ ಸಹೋದ್ಯೋಗಿಗಳೂ ಬೇರೆಯಾದ ಸ್ವಲ್ಪ ಹೊತ್ತಿನಲ್ಲಿ ರಕ್ಷಣಾ ಶ್ರೇಣಿಯೊಳಗಣ ಸ್ಥಿತಿಯೇ ಬೇರೆಯಾಯಿತು. ಅಲ್ಲಿ ಅನೇಕ ಕಡೆ ಬೆಂಕಿಯು ಹತ್ತಿಕೊಂಡಿತು. ಕಾರ್ಯಸಕ್ತರಾದ ಫರಂಗಿಯವರಾರೂ ಅದನ್ನು ಗಮನಿಸಲಿಲ್ಲ. ಹದಿನೈದು ನಿಮಿಷಗಳೊಳಗಾಗಿ ಬೆಂಕಿಯು ತಾನೇ ತಾನಾಯಿತು. ಆರಿಸುವುದೇ ಅಸಾಧ್ಯವಾಗುವಷ್ಟು ದೊಡ್ಡದಾಗಿ ಅದು ಬೆಳೆಯಿತು. ಮದ್ದು ಗುಂಡುಗಳಿದ್ದ ಕಡೆ ಹಂಚಲ್ಪಟ್ಟ ಬೆಂಕಿಯು ಪ್ರಬಲಿಸಿ, ಆಸ್ಫೋಟನೆಗಳಾಗಿ ಭಯಂಕರ ಶಬ್ದವುಂಟಾದಾಗ ಅದು ಫರಂಗಿಗಳನ್ನು ಎಚ್ಚರಗೊಳಿಸಿತು. ಯುದ್ಧ ಮಾಡುತ್ತಿದ್ದವರು ಆಯುಧಗಳನ್ನು ಕೆಳಗೆ ಹಾಕಿ ಓಡಿಬಂದರು. ಅವರಿಗೆ ಸಹಾಯಮಾಡುತ್ತಿದ್ದವರೂ, ದೂರದಲ್ಲಿ ಅಲ್ಲಲ್ಲಿ ಕಾವಲು ಕೊಡುತ್ತಿದ್ದವರೂ ಓಡಿ ಬಂದರು. ಮಧ್ಯದಲ್ಲಿ ಬೆಂಕಿಯು ಉರಿಯುತ್ತಿರುವುದನ್ನೂ ಅಲ್ಲಿಗೆ ಎಲ್ಲ ಕಡೆಗಳಿಂದಲೂ ಜನಗಳು ಧಾವಿಸಿ ಬರುತ್ತಿರುವುದನ್ನೂ ನೋಡಿದರೆ ವರ್ಷಾಕಾಲದಲ್ಲಿ ಮಳೆಯು ಬೀಳುತ್ತಿರುವಾಗ ದೀಪದ ಕಡೆಗೆ ಪತಂಗಗಳು ಹಾರಿ ಬರುತ್ತಿರುವಂತೆ ಭಾಸವಾಗುತ್ತಿತ್ತು.

ಎಲ್ಲರೂ ಬೆಂಕಿಯು ಹತ್ತಿಕೊಂಡಿದ್ದ ಬ್ಯಾರಕ್‌ಗಳ ಕಡೆಗೆ ಓಡಿ ಬರುತ್ತಿರುವಾಗ ಆತುರ ಆತುರವಾಗಿ ಪುರುಷ ವೇಷದಾರಿಣಿಯೊಬ್ಬಳು ರಕ್ಷಣಾ ಶ್ರೇಣಿಯ ದಕ್ಷಿಣ ಪಾರ್ಶ್ವದಿಂದ ಹೊರಗೆ ಹೊರಟು ಹೋಗುವುದರಲ್ಲಿದ್ದಳು. ಗೋಡೆಯ ಸಂದಿಯಲ್ಲಿ ಅಡಗಿ ಕೊಂಡಿದ್ದ ಫರಂಗೀ ಮಹಿಳೆಯೊಬ್ಬಳು ಹಠಾತ್ತನೆ ಬಂದು ರಕ್ಷಣಾ ಶ್ರೇಣಿಯಿಂದ ಹೊರಗೆ ಹೋಗುತ್ತಿದ್ದಾ ವ್ಯಕ್ತಿಯನ್ನು ಎದುರಿಸಿದಳು. ವಿಧಿಯಿಲ್ಲದೇ ಆ ವ್ಯಕ್ತಿಯು ನಿಂತಿತು.

ಫರಂಗೀ ಮಹಿಳೆಯು "ಪುರುಷವೇಷ ಧಾರಿಣಿಯಾದ ಸ್ತ್ರೀಯು ನೀನಾರೇ? ಯಾರನ್ನು ವಂಚಿಸುವುದಕ್ಕಾಗಿ ನಿನಗೀ ವೇಷವೇ?" ಎಂದು ಕೇಳಿದಳು.

ಆ ವ್ಯಕ್ತಿಯು "ನಾನು ಯಾರಾದರೆ ನಿನಗೇನು?" ಎಂದುತ್ತರ ವಿತ್ತಿತು.

"ಈ ಕೋಟೆಯಿಂದ ಯಾರು ಹೊರಗೆ ಹೋಗಬೇಕಾದರೂ ಪರ ವಾನಗಿಯು ಬೇಕು"

ವ್ಯಕ್ತಿಯು ಪರವಾನಗಿಯನ್ನು ತೆಗೆದು ತೋರಿಸಿತು.

ದೂರದಲ್ಲಿ ಬ್ಯಾರಕ್‌ಗಳು ಹತ್ತಿ ಉರಿಯುತ್ತಿದ್ದ ಬೆಂಕಿಯ ಪ್ರಕಾ ಶದಲ್ಲಿ ಫರಂಗೀ ಮಹಿಳೆಯು ಆ ಪರವಾನಗಿಯನ್ನು ನೋಡಿದಳು. ಅನಂ ತರ "ನೀನೇ ಅಜೀಜ್ಹಾಳೋ?" ಎಂದು ಕೇಳಿದಳು.

"ಹಾಗಾದರೆ ನೀನು ಹೋಗಕೂಡದು. ನಾನು ನಿನ್ನನ್ನು ದಸ್ತಗಿರಿ ಮಾಡಿದ್ದೇನೆ. ನೀನು ನನ್ನೊಡನೆ ಬರಬೇಕು"

ಅಜೀಜ್ಹಾಳು ನಿಶ್ಶಸ್ತ್ರಳಾಗಿದ್ದಳು. ಫರಂಗೀ ಹೆಂಗಸಿನಿಂದ ತಪ್ಪಿಸಿ ಕೊಳ್ಳುವುದು ಹೇಗೆಂದು ಗಾಬರಿಯಾದಳು. ಏನುಮಾಡುವುದಕ್ಕೂ ತೋರದೇ ನಿಂತಳು.

ಫರಂಗೀ ಹೆಂಗಸು "ತಂತ್ರ ಮಾಡುವುದರಲ್ಲಿ ಭಾರತೀಯರು ಬಹಳ ಗಟ್ಟಿಗರು. ಆದರೆ ಆ ಗುಣವು ಅವರಲ್ಲಿದೆ ಎಂದು ಫರಂಗಿಯವ ರಿಗೆ ತಿಳಿದ ನಂತರ ಅವರನ್ನು ಮೋಸ ಮಾಡುವುದಕ್ಕಾಗುವುದಿಲ್ಲ" ಎಂದಳು.

ಅಜೀಜ್ಹಾ ಮೊದಲಿನಂತೆಯೇ ನಿಂತಿದ್ದಳು. ಫರಂಗೀ ಹೆಂಗಸು ಅವಳ ಕಡೆಗೆ ನೋಡಿದಳು. ಅನಂತರ "ವಾಪ್ಸು ನಡೀ" ಎಂದಳು.

ಆ ಮಾತು ಕೇಳಿದ ಕ್ಷಣ ಅಜೀಜ್ಹಾಳಿಗೆ ಏನೋ ಹೊಳೆಯಿತು. ಅವಳ ಮುಖವು ಅರಳಿತು. ಅರಳಿದ ಮುಖದಿಂದ ನಗುವು ಕಂಡಿತು. ಧೈರ್ಯದಿಂದ ಅವಳು ಬಂದೂಕು ಹಿಡಿದಿದ್ದ ಫರಂಗೀ ಹೆಂಗಸಿನ ಭುಜ ವನ್ನು ತಟ್ಟಿದಳು. "ನೋಡು! ಬೀಬಿಸಾಬ್. ಇನ್ನು ನಿನ್ನ ಆಟವು ಮುಗಿಯಿತು. ಹಿಂತಿರುಗಿ ನೋಡು. ನಮ್ಮ ಜನ ಆಯುಧ ಸಮೇತ ರಾಗಿ ಬರುತ್ತಿದ್ದಾರೆ. ಇನ್ನು ನೀನು ನನ್ನ ಬಂದಿ" ಎಂದಳು.

ಬೀಬೀಸಾಬ್ ಹಿಂತಿರುಗಿ ನೋಡಿದಳು. ಮಿಂಚಿನ ವೇಗದಿಂದ ಅಜೀಜ಼ಾ ಅವಳ ಕೈಯ್ಯಲ್ಲಿದ್ದ ಬಂದೂಕನ್ನು ಕಿತ್ತು ಕೊಂಡಳು.

ಫರಂಗೀ ಮಹಿಳೆಯು ಕೈ ಹಿಸುಕಿ ಕೊಳ್ಳುತ್ತಾ ಅಜೀಜ಼ಾಳನ್ನು ನೋಡಿದಳು. ಅಜೀಜ಼ಾ ಬಂದೂಕನ್ನು ಬಲಗೈಯಲ್ಲಿ ಹಿಡಿದುಕೊಂಡು ಎಡಗೈಯ್ಯನ್ನು ಫರಂಗಿಯವಳ ಹೆಗಲ ಮೇಲೆ ಹಾಕಿಕೊಂಡು "ಬೀಬೀ ಸಾಹೇಬಾ! ಇನ್ನು ನಡೆಯಿರಿ. ಹೋಗೋಣ" ಎಂದಳು.

ಬೀಬೀಸಾಹೇಬ್ ವಿಧಿಯಿಲ್ಲದೇ ಅವಳನ್ನು ಅನುಸರಿಸಿದಳು.

ದಾರಿಯಲ್ಲಿ ಹೋಗುತ್ತಾ ಏನಾದರೂ ಮಾತನಾಡಲಿಚ್ಛಿಸಿ ಅಜೀಜ಼ಾ ಅವಳನ್ನು "ನಿನ್ನ ಹೆಸರೇನು?" ಎಂದಳು.

ಅವಳು "ಫ್ಲೋರಾ" ಎಂದುತ್ತರವಿತ್ತಳು.

ಅವಳ ಹೆಸರನ್ನು ತಿಳಿದುಕೊಂಡನಂತರ ಅಜೀಜ಼ಾ ಇನ್ನೇನೂ ಮಾತನಾಡಲಿಲ್ಲ.

ಅನಂತರ ಆ ಮಹಿಳೆಯರಿಬ್ಬರೂ ವಿಪ್ಲವಕಾರರ ಶಿಬಿರದ ಕಡೆಗೆ ಹೋದರು.

## ಹರಹರಮಹಾದೇವನ ಮಂದಿರದ ಬಳಿ

ಭಾರತದಲ್ಲಿ ಬ್ರಿಟಿಷರು ನೆಲೆಸಿದ ನೂರನೆಯ ವರ್ಷಕ್ಕೆ ಅವರಿಗೆ ಅಂತ್ಯಕಾಲವು ಬರುವುದೆಂನು ಹೇಳಲ್ಪಡುತ್ತಿದ್ದಂತೆಯೇ ಆಯಿತು. ಇಪ್ಪತ್ತಮೂರನೆಯ ತಾರೀಖು ನಡೆದ ಯುದ್ಧದಲ್ಲಿ ಅವರಿಗೆ ಸೋಲಾಯಿತು. ಅಜೀಜ಼ಾಳೂ ಅವಳ ಸಹೋದ್ಯೋಗಿಗಳೂ ಆ ರಾತ್ರಿ ನಡೆಯಿಸಿದ ಸಾಹಸ-ಕಾರ್ಯಗಳಿಂದ ಅವರಿಗೆ ಸರ್ವನಾಶವುಂಟಾಯಿತು. ಮಾರನೆಯ ದಿನ ಪುನಃ ಯುದ್ಧವನ್ನು ಕಟ್ಟುವುದಕ್ಕಾಗುವುದೇ ಎಂದು ಜನರಲ್ ವೀಲರ್‌ನು ಆಲೋಚನೆ ಮಾಡಿದನು. ಆಲೋಚನೆ ಮಾಡುವುದೇ ಏನು? ಪ್ರಯತ್ನವನ್ನೂ ಮಾಡಿ ನೋಡಿದನು. ಆದರದು ನಡೆಯಲಿಲ್ಲ. ಮಾರನೆಯ ದಿನ ಆದ ಅನುಭವವು ಅವರನ್ನು ಕಂಗಾಲು

ಗೊಳಿಸಿದ್ದಿತು. ಅವರ ಧ್ಯಾನ ಸಂಗ್ರಹಣ ಮತ್ತು ಮದ್ದು ಗುಂಡುಗಳ ಕೋಠಿಯು ಉರಿದು ಬೂದಿಯಾಗಿದ್ದವು. ಹೆಂಗಸರು ಮಕ್ಕಳಿದ್ದ ಬ್ಯಾರಕ್‌ಗಳೂ,ರೋಗಿಗಳಿಗೂ ಗಾಯಗೊಂಡವರಿಗೂ ಆಶ್ರಯವಾಗಿದ್ದ ಆಸ್ಪತ್ರೆಗಳೂ ಗುರುತಿಲ್ಲದಂತಾಗಿದ್ದವು. ಹೆಂಗಸರು ಮಕ್ಕಳು ನಿಲ್ಲಲು ನೆರಳಿಲ್ಲದೇ ಬಿಸಿಲಿನಲ್ಲಿಯೇ ಒಣಗುತ್ತಾ ಬಿದ್ದಿರ ಬೇಕಾಯಿತು. ರೋಗಿಗಳು ಜೂನ್ ತಿಂಗಳ ಬಿಸಿಲಿನಲ್ಲಿ ಬಿದ್ದಿರಲಾರದೇ ತಪಿಸುತ್ತಿದ್ದರು. ಹೀಗಿರುವಾಗ ಯುದ್ಧ ಮಾಡುವುದೆಲ್ಲಿ?

ಫರಂಗೀ ಸೈನ್ಯದ ವೀರರೂ ದಳಪತಿಗಳು ಮರಣ ಹೊಂದಿದ್ದರು; ಅಥವಾ ಗತಪ್ರಾಣರಾಗಿದ್ದರು. ನಾನಾರಾಯನನ್ನು ಕರಸಿ ನವಾಬಗಂಜನ್ನು ಒಪ್ಪಿಸಿಕೊಟ್ಟ ಹಿಲ್ಲರ್ಡ್‌ಸನ್ ವಿಪ್ಲವಕಾರರ ಗುಂಡಿಗೆ ಸಿಕ್ಕಿ ತನ್ನ ಹರೆಯದ ಹೆಂಡತಿಯ ಕಣ್ಣೆದುರಿಗೆ ಮೃತನಾಗಿದ್ದನು. ಕಾನ್‌ಪುರ ಜಿಲ್ಲೆಯ ಅಧಿಕಾರಿಯಾಗಿದ್ದ-ಬಾರಾಸಾಹೇಬನು ರಕ್ಷಣಾ ಶ್ರೇಣಿಯ ಹೊರವಳಯದಲ್ಲಿ ಅಸುವನ್ನು ನೀಗಿದ್ದನು. · ಕಾನ್‌ಪುರದಲ್ಲಿ ದೇಶೀ ಜನಗಳು ಯಾವನಿಗೆ ಮಣಿಯುತ್ತಿದ್ದರೋ, ಯಾರ ಆಜ್ಞೆಯಿಂದ ಸಹಸ್ರ ಸಹಸ್ರ ಸೇನೆಯು ಚಲಿಸುತ್ತಿದ್ದಿತೋ ಆ ಬಾರಾಸಾಹೇಬನ ಮೃತಶರೀರವು ಹೊರಗಡೆ ಬಿದ್ದಿತು. ಕರ್ನಲ್ ವಿಲಿಯಮ್ಸ್ ಆ ಜೂನ್ ತಿಂಗಳ ಬಿಸಿಲನ್ನು ತಡೆಯಲಾರದೇ ವಿಪ್ಲವಕಾರರ ಗುಂಡು ತಗುಲುವ ಮೊದಲೇ ಮೃತನಾಗಿದ್ದನು. ಜನರಲ್ ವೀಲರ್ ಗುಂಡಿನೇಟಿನಿಂದ ·ಪರಿತಪಿಸುತ್ತಾ ಮಲಗಿದ್ದನು. ಮಗದೊಬ್ಬ ದಳಪತಿಯು ಕುರುಡನಾಗಿ ಹುಚ್ಚನಂತೆ ಕೂಗುತ್ತಾ ಅಲ್ಲಿ ಅಲೆಯುತ್ತಿದ್ದನು.

ಆ ದಿನವಂತೂ ವೀಲರನ ಶಿಬಿರವು ಸೈನ್ಯ ಶಿಬಿರದಂತೆ ಕಂಡು ಬರುತ್ತಿರಲಿಲ್ಲ. ಅದೊಂದು ಭಯಂಕರವಾದ ಸ್ಮಶಾನದಂತೆ ಕಾಡುಬರುತ್ತಿತ್ತು. ಅಲ್ಲಿ ಶಿಸ್ತು ವ್ಯವಸ್ಥೆಗಳೊಂದೂ ಇರಲಿಲ್ಲ. ರಕ್ಷಣಾ ಶ್ರೇಣಿಯ ಹೊರಗಡೆ ಹೋಳಲ್ಪಟ್ಟ ಯೋಧರ ಹೆಣಗಳನ್ನು ಕಿತ್ತು ಹೊರಗೆಳೆಯುತ್ತಿದ್ದ ನಾಯಿನರಿಗಳನ್ನು ಓಡಿಸುವವರೂ ಅಲ್ಲಿ ದಿಕ್ಕಿರಲಿಲ್ಲ. ಹೊರಗೆ ಬಿದ್ದಿದ್ದ ಹೆಣಗಳನ್ನು ಕಾಗೆ ಹದ್ದುಗಳು ಮುಟ್ಟದಂತೆ ಗಮನಿಸುವವರೂ ಇರಲಿಲ್ಲ. ಆಹಾರವಿಲ್ಲದ ಆದಿನ ಗೋಳು ಗೋಳಾಗಿದ್ದಿತು. ಆ ದಿನ ನಾಯಿಗಳನ್ನೂ ಕುದುರೆಗಳನ್ನೂ ಕೊಂದು ಅಡಿಗೆ ಮಾಡಿದರು.

ಭಯಂಕರವಾದ ಆ ದಿನವು ಕಳೆದು ಬೆಳಗಾದ ಕೂಡಲೇ ರಕ್ಷಣಾ ಶ್ರೇಣಿಯ ಮೇಲೆ ಬಿಳಿಯ ಬಾವುಟಗವನ್ನು ಹಾಕಬೇಕೆಂದು ಜನರಲ್ ವೀಲರ್ ಅಪ್ಪಣೆ ಮಾಡಿದನು. ಶರಣಾಗತಿಯ ಗುರುತಾದ ಶ್ವೇತಧ್ವಜ ವನ್ನು ಕಂಡ ಕೂಡಲೇ ವಿಪ್ಲವಕಾರರು ಯುದ್ಧವನ್ನು ನಿಲ್ಲಿಸಿದರು. ನಾನಾರಾಯನ ಅಪ್ಪಣೆಯ ಪ್ರಕಾರ ಅಜಿಮುಲ್ಲಾಖಾನನು ಜನರಲ್ ವೀಲರನಿಗೆ ಒಂದು ಕಾಗದವನ್ನು ಬರೆದು ಕಳುಹಿಸಿದನು. ಆಯುಧಗ ಳನ್ನು ಕೆಳಗಿಟ್ಟು ಶರಣಾಗತರಾಗುವಂತಹ ಫರಂಗಿಗಳ ಜೀವವುಳಿಸಲು ನಾನಾರಾಯನ ಅಭ್ಯಂತರವಿಲ್ಲವೆಂಬ ಪತ್ರವನ್ನು ಫ್ಲೋರಾಳೇ ಬರೆದಿದ್ದಳು.

ನಾನಾರಾಯನ ಅಪ್ಪಣೆಯ ಪ್ರಕಾರ ಅಜುಮುಲ್ಲಾಖಾ ಮತ್ತು ಜ್ವಾಲಾಪ್ರಸಾದರು ವೀಲರ್‌ನಲ್ಲಿಗೆ ರಾಯಭಾರಿಗಳಾಗಿ ಹೋದರು. ಇದು ರಾಯಭಾರವಲ್ಲ. ಇದರಲ್ಲಿ ಸಂಧಿ ಸಂಧಾನಗಳೊಂದೂ ಇಲ್ಲ. ಗತಪ್ರಾಣ ರಾಗಿರುವಂತಹ ಫರಂಗಿಗಳಿಗೆ ಜೀವದಾನ ಮಾಡಲು ವಿಪ್ಲವಕಾರರು ಒಪ್ಪಿಕೊಂಡಿದ್ದರು. ಅವರಿಗೆ ಹೇಗೆ ಜೀವಪ್ರದಾನವು ಮಾಡಲ್ಪಡಬೇಕು. ? ಮುಂದೆ ಅವರೆಲ್ಲಿರುವುದು ಎಂಬುದನ್ನು ನಿರ್ಧರಿಸುವುದು ಮಾತ್ರ ಅದರ ಉದ್ದೇಶ.

ವಿಪ್ಲವದ ರಾಯಭಾರಿಗಳು ಫರಂಗಿಗಳು ಶರಣಾಗತರಾಗಿರುವುದ ರಿಂದ ಅವರ ಪ್ರಾಣಗಳನ್ನು ಉಳಿಸುವುದಾಗಿ ಹೇದರು. ಅವರುಗಳು ಕಾ‍ನ್ಪುರದಿಂದ ಹೊರಗೆ ಹೋಗಲಪೇಕ್ಷಿಸಿದರೆ ಹೊಗಬಹುದೆಂದೂ ಆದರೆ ಅದಕ್ಕೆ ಬೇಕಾದ ಖರ್ಚು ವೆಚ್ಚಗಳು ಅವರದೇ ಎಂದೂ ತಿಳಿಸಿದರು. ಬಂದಿಗಳಾಗಿ ಸಿಕ್ಕಿದ ಫರಂಗಿಗಳು ಯುದ್ಧದಲ್ಲಿ ಕೈಸೆರೆ ಹಿಡಿಯಲ್ಪಟ್ಟವರಲ್ಲ ವೆಂದೂ ತಪ್ಪು ಸಾಬೀತಾಗಿ ಶಿಕ್ಷೆ ವಿಧಿಸಲ್ಪಟ್ಟವರು ಅದನ್ನು ಅನುಭವಿಸ ಬೇಕಾದ್ದು ಎಂದೂ ವಿವರಿಸಿದರು.

ಜನರಲ್ ವೀಲರ್ ಇದಕ್ಕೆಲ್ಲಾ ಒಪ್ಪಿಕೊಂಡನು. ತಾನು ಕಳೆದುಳಿದ ವರೊಡನೆ ಅಲಹಾಬಾದಿಗೆ ಹೋಗಲಪೇಕ್ಷಿಸುವುದಾಗಿ ಹೇಳಿದನು. ಕಾನ್ಪುರ ದಿಂದ ಅಲ್ಲಿಗೆ ಹೋಗಲು ದೋಣಿಗಳನ್ನು ಏರ್ಪಡಿಸಿ ಕೊಡಬೇಕೆಂದೂ,ಅಲ್ಲಿ ಗೆ ತಲುಪುವವರೆಗೆ ಉದರಭರಣಕ್ಕಾಗಿ ಆಹಾರವನ್ನು ಒದಗಿಸಿ ಕೊಡ ಬೇಕೆಂದೂ ಈ ಖರ್ಚಿಗಾಗಿ ತನ್ನ ಬಳಿ ಇರುವ ಎರಡು ಲಕ್ಷ ರೂಪಾಯಿ

ಗಳಷ್ಟು ದ್ರವ್ಯವನ್ನು ಕೊಡುವುದಾಗಿ ತಿಳಿಸಿದನು. ಆಯುಧಗಳನ್ನೂ ಉಳಿದಿರುವ ಮದ್ದು ಗುಂಡುಗಳನ್ನೂ ಅಲ್ಲಿಯೇ ಬಿಟ್ಟು ಫರಂಗಿಯವರು ನಿಶ್ಶಸ್ತ್ರರಾಗಿ ಹೋಗುವುದಾಗಿ ತಿಳಿಸಿದನು.

ಇಪ್ಪತ್ತೇಳನೆಯ ತಾರೀಖು ಪ್ರಾತಃಕಾಲ ಫರಂಗಿಯವರು ಅಲಹಾಬಾದಿಗೆ ಪ್ರಯಾಣ ಮಾಡತಕ್ಕದ್ದೆಂದು ಗೊತ್ತಾಗಿದ್ದಿತು. ಹಿಂದಿನ ದಿನ ಸಾಯಂಕಾಲ ವೀಲರನ ಕಡೆಯವರು ಆನೆಗಳ ಮೇಲೆ ಬಂದರು. ದೋಣಿಗಳನ್ನು ನೋಡಿದರು. ಅವು ಚೆನ್ನಾಗಿಲ್ಲವೆಂದೂ ಫರಂಗಿಯ ಜನಗಳು ಕುಳಿತುಕೊಂಡು ಹೋಗಲು ಸೌಕರ್ಯವಾಗಿಲ್ಲವೆಂದೂ ಹೇಳಿದರು. ಕೂಡಲೇ ನೂರಾರು ಮಂದಿ ಕೂಲಿಗಳನ್ನು ಬಿಟ್ಟು ಆ ರಾತ್ರಿಯೇ ಅವುಗಳನ್ನು ಸರಿಪಡಿಸಲಾಯಿತು. ಫರಂಗಿಯವರು ಬೇಕೆಂದು ಕೇಳಿದ ಆಹಾರ ಪದಾರ್ಥಗಳೆಲ್ಲವನ್ನೂ ದೋಣಿಗಳಲ್ಲಿ ಸಿದ್ಧಪಡಿಸಲಾಯಿತು. ರಾತ್ರಿಯು ಕಳೆದು ಬೆಳಗಾಗುವುದರೊಳಗಾಗಿ ಫರಂಗಿಯವರು ಒಪ್ಪಿಕೊಳ್ಳುವ ರೀತಿಯಲ್ಲಿ ಅವರುಗಳನ್ನು ಅಲಹಾಬಾದಿಗೆ ಕರದೊಯ್ಯಲು ನಲವತ್ತು ದೋಣಿಗಳು ಸಿದ್ಧವಾದವು.

ಕಾರ್ಣಪುರದಿಂದ ಹೊರಡುವಂತಹ ಫರಂಗಿಗಳು ಸತೀಚೌರಾ ಘಾಟಿನಿಂದ ಪ್ರಯಾಣ ಮಾಡುವುದೆಂದು ಏರ್ಪಾಡಾಗಿದ್ದಿತು. ರಕ್ಷಣಾ ಶ್ರೇಣಿಯಿಂದ ಅಲ್ಲಿಗೆ ಒಂದೂವರೆ ಮೈಲಿಗಳ ದೂರವಿದ್ದಿತು. ಬೆಳಗಾಗುತ್ತಲೇ ಜನರಲ್ ವೀಲರನು ತನ್ನ ಜನಗಳಿಗೆ ಪ್ರಯಾಣ ಸನ್ನದ್ಧರಾಗಲು ಅಪ್ಪಣೆ ಮಾಡಿದನು. ಎಲ್ಲರೂ ಹೊರಟರು.

ಇವರುಗಳು ಹೊರಡಲು ವಿಪ್ಲವಕಾರರು ಬೇಕಾದ ಏರ್ಪಾಡುಗಳೆಲ್ಲವನ್ನೂ ಮಾಡಿದ್ದರು. ಗಂಗಾತೀರಕ್ಕೆ ಕೊಂಡೊಯ್ಯಲು ಫರಂಗಿಗಳಿಗಾಗಿ ಆನೆಗಳೂ ಪಲ್ಲಕ್ಕಿಗಳೂ ಎತ್ತಿನ ಗಾಡಿಗಳೂ ಬಂದಿದ್ದವು. ಹೆಂಗಸರೂ ಮಕ್ಕಳನ್ನೂ, ರೋಗಿಷ್ಠರನ್ನೂ ಗಾಯಗೊಂಡವರನ್ನೂ, ಅವುಗಳಲ್ಲಿ ಸರಿಯಾಗಿ ಕೂರಿಸಲಾಯಿತು. ಇವಿಷ್ಟೂ ಆದನಂತರ ಅನೇಕ ಯುವಕರು ನಡೆದುಕೊಂಡೇ ಹೊರಟರು.

ಸುಮಾರು ಇಪ್ಪತ್ತು ದಿನಗಳಕಾಲ ನಡೆದ ಘೋರವಾದ ಯುದ್ಧದಿಂದ ಫರಂಗಿಗಳು ಬೇಸತ್ತು ಹೋಗಿದ್ದರು. ಕೇವಲ ಇಪ್ಪತ್ತೇ ದಿನಗ

ಳಲ್ಲಿ ರೂಪವಂತರು ರೂಪವನ್ನು ಕಳೆದುಕೊಂಡಿದ್ದರು. ಯುವಕರು ಯೌವನವನ್ನು ಕಳೆದು ಕೊಂಡಿದ್ದರು. ಹಾಸಿಗೆಯನ್ನು ಹಿಡಿದವರು ಪ್ರತಿ ಕ್ಷಣವೂ ಮೃತ್ಯುವನ್ನು ಎದುರು ನೋಡುತ್ತಿದ್ದರು. ತಮಗೆ ನರಕ ಸದೃಶ ವಾದ ಕಾನ್‌ಪುರವನ್ನು ಬಿಟ್ಟು ಹೋಗುವುದೆಂದರೆ ಇಂತಹವರುಗಳಿಗೆ ಎಷ್ಟೋ ಆನಂದಕರವಾಗಿದ್ದಿತು. ತಮ್ಮ ಜನಗಳಿರುವ ಅಲಹಾಬಾದಿಗೆ ಹೋಗುವುದೆಂದರೆ ಅವರಿಗೆಷ್ಟೋ ಆಶಾದಾಯಕವಾಗಿದ್ದಿತು. ಕಾನ್‌ಪು ರದಲ್ಲಿ ವಿಪ್ಲವಾರಂಭವಾದನಂತರ ಫರಂಗಿಗಳಿಗೆ ಸುಖಕರವಾಗಿದ್ದ ಕಾಲ ವೆಂದರೆ ಆಗಲೇ ಎಂದು ಹೇಳಬಹುದು.

ಈ ಯಾತ್ರೆಯು ಸತೀಚೌರಾ ಘಾಟಿಗೆ ಬರಲು ಒಂದು ಗಂಟೆಯ ಕಾಲವು ಹಿಡಿಯಿತು. ಸೂರ್ಯನ ಪ್ರಕಾಶಮಾನವಾದ ಎಳೆಯ ಬಿಸಿಲು. ಗಂಗಾನದಿಯ ಮೇಲಿನಿಂದ ಬೀಸುತ್ತಿದ್ದ ಶೀತಲವಾದ ಗಾಳಿ. ತಮ್ಮನ್ನು ಅಲಹಾಬಾದಿಗೆ ಕೊಂಡಯ್ಯಲು ಕಾದು ನಿಂತಿದ್ದ ದೋಣಿಗಳು. ಇವುಗ ಳಿಂದ ಫರಂಗಿಯವರು ಎಷ್ಟೋ ಹರ್ಷಗೊಂಡರು.

ಕಾನ್‌ಪುರದಲ್ಲಿ, ಗಂಗಾನದೀ ತೀರದಲ್ಲಿ, ಸತೀಚೌರಾಘಾಟ್ ಎಂಬು ದು ಬಹಳ ಸುಂದರವಾದ ಪ್ರದೇಶ. ಕಣ್ಣಿನ ದೃಷ್ಟಿಯು ಹೋಗುವಷ್ಟು ದೂರವೂ ಕಂಡುಬರುವ ನಿರ್ಮಲವಾದ ಜಲರಾಶಿ. ಬಾಲ ಸೂರ್ಯನ ಕಿರಣಗಳು ಬಿದ್ದು ರಜತ ಪರ್ವತದ ಶಿಖರಗಳಂತೆ ಕಂಗೊಳಿಸುವ ಅಲೆ ಗಳು. ಅದರ ಪಕ್ಕದಲ್ಲಿ ಗಂಗಾಮಾತೆಯು ಕರೆಯಲು ಚಾಚಿದ ಕೈಗಳೋ ಎಂಬಂತಿರುವ ಸೋಪಾನಗಳು. ಅದರ ಮೇಲುಗಡೆ, ದಡದಲ್ಲಿ ಸುಂದರ ವಾದ ದೈವಮಂದಿರ. ಅತಿರಭಸದಿಂದ ಬರುತ್ತಿದ್ದ ಗಂಗೆಯ ವೇಗ ವನ್ನು ತಡೆಯಲೆಣಿಸಿ, ಜಡೆಯಲ್ಲಿ ಭಂಧಿಸಿ, ಅನಂತರ ನಿದಾನವಾಗಿ ಹೋಗಲೆಂದ ಬಿಟ್ಟು, ಹರಮಹದೇವನು ಈಗ ಗಂಭೀರವಾಗಿ ಹರಿಯು ತ್ತಿದ್ದ ಗಂಗೆಯನ್ನು ನೋಡುತ್ತಾ ಮಂದಹಾಸವದನನಾಗಿ ಆ ಮಂದಿರದಲ್ಲಿ ನೆಲೆಸಿದ್ದಾನೆ.

ಫರಂಗಿಗಳು ಈ ಮಂದಿರದ ಬಳಿಗೆ ಬಂದರು. ಆ ಮಂದಿರದ ಪ್ರಾಂಗಣದಲ್ಲಿ ತಾಂತ್ಯಾಟೋಪಿ, ಅಜಿಮುಲ್ಲಾಖಾನ್, ಟೀಕ್ ಸಿಂಗ್, ಜ್ವಾಲಾಪ್ರಸಾದ್ ಮುಂತಾದವರು ಕುಳಿತಿದ್ದರು. ಮಂದಿರದ ಬಳಿಗೆ

ಬರುತ್ತಲೇ ಫರಂಗೀ ಶ್ರೇಣಿಯು ನಿಂತುಕೊಂಡಿತು. ಜನರಲ್ ವೀಲರ್ ಕುಳಿತಿದ್ದ ಪಲ್ಲಕ್ಕಿಯು ಮುಂದೆ ಬಂದಿತು.

ವೀಲರನು ತಾಂತ್ಯಾಟೋಪಿಯ ಕಡೆಗೆ ನೋಡಿ "ನಾವು ಹೊರಡಬಹುದೇ ?" ಎಂದು ಕೇಳಿದನು.

ತಾಂತ್ಯಾಟೋಪಿಯು "ದೋಣಿಗಳು ಸಿದ್ಧವಾಗಿವೆ. ನೀವು ಕೇಳಿದ ಸೌಕರ್ಯಗಳೆಲ್ಲವನ್ನೂ ಅದರಲ್ಲಿ ಏರ್ಪಡಿಸಲಾಗಿದೆ. ದಾರಿಯಲ್ಲಿ ತೊಂದರೆಯಾಗದಂತೆ ಬೇಕಾದಷ್ಟು ಆಹಾರ ಪದಾರ್ಥಗಳನ್ನು ಇಡಿಸಲಾಗಿದೆ. ನೀವು ಹೊರಡಬಹುದು" ಎಂದು ಹೇಳಿದನು.

ವೀಲರನ ಅಪ್ಪಣೆಯಂತೆ ಫರಂಗಿಯವರು ತಮ್ಮ ವಾಹನಗಳಿಂದಿಳಿದು ದೋಣಿಗಳನ್ನು ಹತ್ತಿದರು. ಎಲ್ಲರೂ ಹತ್ತಿದನಂತರ ವೀಲರನು ಪ್ರಾಂಗಣದಲ್ಲಿ ಕುಳಿತಿದ್ದ ವಿಪ್ಲವದ ನಾಯಕರನ್ನು ಬೀಳ್ಕೊಂಡು ಬೋಯಿಗಳಿಗೆ ಪಲ್ಲಕ್ಕಿಯನ್ನು ತನಗಾಗಿ ಸಿದ್ಧವಾಗಿದ್ದ ದೋಣಿಯ ಬಳಿಗೆ ಕೊಂಡು ಹೋಗಲು ಹೇಳಿದನು. ಅವರು ಕೆಳಗಿನ ಮೆಟ್ಟಲಿನವರೆವಿಗೆ ಪಲ್ಲಕ್ಕಿಯನ್ನು ತೆಗೆದುಕೊಂಡು ಹೋದರು.

ಅಲ್ಲಿಗೆ ಸುಮಾರು ಒಂದು ಒಂದೂವರೆ ಫರ್ಲಾಂಗುಗಳ ದೂರದಲ್ಲಿ ಹರಮುಹದೇವನ ಮಂದಿರದ ಬಳಿ ನಿಂತು ತಾಂತ್ಯಾಟೋಪಿಯು ತುತ್ತೂರಿಯನ್ನು ಊದಿದನು. ಆ ಶಬ್ಧವನ್ನು ಕೇಳಿ ಅಂಬಿಗರು ಪ್ರಯಾಣ ಕಾಲದಲ್ಲಿ ತಮಗೆ ಸಹಜವಾದ ಹಾಡುಗಳನ್ನು ಹಾಡಲು ಆರಂಭಿಸಿದರು.

ಆದರೆ ಮಿಕ್ಕ ದೋಣಿಗಳೆಲ್ಲವೂ ಹೊರಡಲನುವಾಗುತ್ತಿದ್ದರೂ ಜನರಲ್ ವೀಲರನು ಇನ್ನೂ ಪಲ್ಲಕ್ಕಿಯಿಂದಿಳಿದು ದೋಣಿಯನ್ನು ಹತ್ತಿರಲಿಲ್ಲ. ನೇರವಾಗಿ ದೋಣಿಗೆ ನಡೆದು ಹೋಗಲವಕಾಶವಾಗುವಂತೆ ಪಲ್ಲಕ್ಕಿಯನ್ನು ನಿಲ್ಲಿಸಲು ಹೇಳಿದನು ಬೋಯಿಗಳು ನೀರಿನಲ್ಲಿಳಿದು ಅನುಗೊಳಿಸುತ್ತಿದ್ದರು.

ಅಷ್ಟರಲ್ಲಿ ಅಜೀಜಾಬಾಯಿ ಬಂದು ಬೋಯಿಗಳಿಗೆ "ತಡೆಯಿರಿ" ಎಂದು ಹೇಳಿದಳು. ಅವರು ಆ ಧ್ವನಿಯಿಂದ ಚಕಿತರಾಗಿ ಸ್ಥಬ್ಧರಾದರು. ಏನೆಂದು ಜನರಲ್ ವೀಲರ್‌ನು ತಿರುಗಿ ನೋಡಿದನು.

" ನಾನಾರೆಂಬುದು ಕಮಾಂಡರಿಗೆ ಗೊತ್ತಿದೆಯೋ ? " ಎಂದು ಅವಳು ವೀಲರನನ್ನು ಕೇಳಿದಳು ಕೋಮಲವಾದರೂ ಅವಳ ಕಂಠದಿಂದ ಆಗ ಹೊರಟ ಧ್ವನಿಯು ಗಡುಸಾಗಿದ್ದಿತು.

ಅವಳನ್ನು ನೋಡುತ್ತಲೇ ವೀಲರನಿಗೆ ಉರಿದು ಹೋಗುವಷ್ಟು ಕೋಪವು ಬಂದಿತು. ಅವಳು ನಾನಾರಾಯನ ಗೂಢಚಾರಿಣಿಯಾಗಿ ಬಂದು ಶಿಬಿರದಲ್ಲಿ ಮಾಡಿದ ಕೆಲಸವು ಜ್ಞಾಪಕಕ್ಕೆ ಬಂದಿತು. ಆದರೆ ಅವನಾ ಸ್ಥಿತಿಯಲ್ಲಿ ಕೋಪವನ್ನು ತೋರಿಸಲಿಲ್ಲ. ತೋರಿಸುವ ಪರಿಸ್ಥಿತಿಯಲ್ಲಿಯೂ ಇರಲಿಲ್ಲ.

ಅವನು ಹೇಳಿದನು-" ಬಲ್ಲೆ ! ನೀನು ಅಜೀಜ್ಞಾ ! "

" ಆದರೆ ನಾನೇಕೆ ಬಂದಿರುವೆನೆಂಬುದು ನಿನಗೆ ತಿಳಿದಿರಲಾರದು. ಅದನ್ನು ಹೇಳುವುದಕ್ಕಾಗಿ ಬಂದಿದ್ದೇನೆ.

" ಇಲ್ಲ. ನನಗೆ ಗೊತ್ತಿಲ್ಲ. "

" ನಾನು ಪ್ರತೀಕಾರವನ್ನು ತೆಗೆದುಕೊಳ್ಳುವುದಕ್ಕಾಗಿ ಬಂದಿದ್ದೇನೆ"

" ಅಜೀಜ್ಞಾ ! ನನಗೆ ನಾನಾರಾಯನ ರಕ್ಷಣೆಯಿದೆ. ಅಲ್ಲಿ ದೇವಾಲಯದಲ್ಲಿ ವಿಪ್ಲವದ ನಾಯಕರು ಕುಳಿತಿದ್ದಾರೆ. ಅವರು ನನಗೆ ಬೆಂಗಾವಲಾಗಿದ್ದಾರೆ. ಅದು ಹಾಗಿರಲಿ. ನಾನು ನಿನಗೆ ಯಾವ ದ್ರೋಹ ಮಾಡಿದ್ದೇನೆ ? ನನ್ನ ಮೇಲೆ ಪ್ರತೀಕಾರವೆಂದರೇನು ? "

" ಅದನ್ನು ಹೇಳುವುದಕ್ಕೇ ಬಂದೆ. ಕಾಶೀ ಮತ್ತು ಅಲಹಾಬಾದ್‌ಗಳಲ್ಲಿ ಫರಂಗಿಗಳು ನಿರಪರಾಧಿಗಳಾದ ನಮ್ಮವರ ಮೇಲೆ ತೋರಿದ ಕ್ರೌರ್ಯದ ಪ್ರತೀಕಾರವನ್ನು ತೆಗೆದುಕೊಳ್ಳಲು ಬಂದಿದ್ದೇನೆ. ಜನರಲ್ ನೈಲ್ ನಡಸಿದ ಅತ್ಯಾಚಾರಗಳ ಪ್ರತೀಕಾರವನ್ನು ತೆಗೆದುಕೊಳ್ಳಲು ಬಂದಿದ್ದೇನೆ. ಕಾಶೀ ಅಲಹಾಬಾದ್‌ಗಳಿಂದ ಬಂದಿರುವ ನಿರಾಶ್ರಿತರು ಈ ಪ್ರತೀಕಾರವನ್ನು ನೋಡಲು ಇಲ್ಲಿ ಬಂದು ಸೇರಿದ್ದಾರೆ. ಯಾರ ಮನೆ ಮಠಗಳು ಉರಿದು ಹೋದವೋ, ಯಾರ ರಾಷ್ಟ್ರ ಮತ್ತು ಮತಗಳು ಅವಮಾನಗೊಳಿಸಲ್ಪಟ್ಟವೋ, ಯಾರ ಹೆಂಡತಿ ಮಕ್ಕಳು ತೊಟ್ಟಿಲುಗಳ ಬಳಿಯೇ ಉರಿದು ಹೋದರೋ, ಯಾರ ಬಂಧುಬಳಗದವರು ಮರದ ಕೊಂಬೆಗಳಿಗೆ ನೇಣು ಹಾಕಲ್ಪಟ್ಟರೋ, ಅವರೆಲ್ಲರೂ, ಪ್ರತೀಕಾರವನ್ನು ನೋಡುವುದಕ್ಕೆ ಬಂದಿದ್ದಾರೆ. ಫರಂಗೀ ಕಿರಾತರ

ಹರ್ಷನಾದ ಮತ್ತು ಚಪ್ಪಾಳೆಗಳ ನಡುವೆ ಯಾರ ಹೆಂಡತಿಯರ ಮತ್ತು ಹೆಣ್ಣು ಮಕ್ಕಳ ತಲೆಯ ಜುಟ್ಟಿಗೆ ಬೆಂಕಿ ಹಚ್ಚಲಾಯಿತೋ-ಸೀರೆಗಳಿಗೆ ಬೆಂಕಿ ಹಚ್ಚಲಾಯಿತೋ ಅವರುಗಳು ಪ್ರತೀಕಾರವನ್ನು ನೋಡುವುದಕ್ಕೆ ಬಂದಿದ್ದಾರೆ.

ಗುಡುಗಿನಂತಹ ಈ ಮಾತುಗಳನ್ನು ಕೇಳಿ ವೀಲರನು ಕ್ಷಣ ಕಾಲ ಅವಕ್ಕಾದನು. ಅನಂತರ ಸುದಾರಿಸಿಕೊಂಡು ದೇವಮಂದಿರದಲ್ಲಿದ್ದ ವಿಪ್ಲವದ ನಾಯಕರನ್ನು ಕರೆಯುವದಕ್ಕಾಗಿ ತಲೆ ಎತ್ತಿ ನೋಡಿದರು. ಅವನಿಗೆ ಹರದೇವನ ಮಂದಿರವು ಕಂಡುಬರಲಿಲ್ಲ. ಕೇವಲ ಸೋಪಾನ ಗಳೇ ಕಂಡವು. ಎದುರಿಗೆ ನೋಡಿದನು. ಹೊಳೆಯುತ್ತಿದ್ದ ಉದ್ದವಾದ ಖಡ್ಗವನ್ನು ಹಿಡಿದು ಮಹಾಕಾಳಿಯಂತೆ ಅಜೀಜ್ಹಾಳು ನಿಂತಿದ್ದಳು.

ವೀಲರನು ಆ ಕಡೆಗಾಲದಲ್ಲಿ ತಲೆಯನ್ನು ಪಲ್ಲಕ್ಕಿಯಿಂದ ಹೊರಗೆ ಚಾಚಿ "ಹೆಲ್ಪ್-ಹೆಲ್ಪ್" ಎಂದು ಕೂಗಿಕೊಂಡನು. ಆದರೆ ಮರು ಕ್ಷಣದಲ್ಲಿಯೇ ಅಜೀಜ್ಹಾಳು ತನ್ನ ನೀಳವಾದ ಖಡ್ಗವನ್ನು ಮೇಲೆತ್ತಿ ಹೊರಗೆ ಚಾಚಲ್ಪಟ್ಟ ಕುತ್ತಿಗೆಯ ಮೇಲೆ ಬಲವಾಗಿ ಫರಂಗೀ ದಳಪತಿಯ ಶಿರವು ಗಂಗಾ ಪ್ರವಾಹದಲ್ಲಿ ಬಿದ್ದಿತು.

ಬೀಸಿದ ಕತ್ತಿಯು ಕೆಳಗೆ ಬರುತ್ತಲೇ ಅಜೀಜ್ಹಾಳು ಸೊಂಟದಲ್ಲಿ ನೇತಾಡುತ್ತಿದ್ದ ತುತ್ತೂರಿಯನ್ನು ಎಡಗೈಯಿಂದ ಮೇಲೆತ್ತಿ ಗಟ್ಟಿಯಾಗಿ ಊದಿದಳು. ಆ ಶಬ್ದವನ್ನು ಕೇಳುತ್ತಲೇ ದಡದಲ್ಲಿದ್ದ ನೂರಾರು ಮಂದಿ ಸೈನಿಕರು ದೋಣಿಗಳಲ್ಲಿದ್ದವರ ಮೇಲೆ ಗುಂಡುಗಳನ್ನು ಹಾರಿಸಿದರು. ನೀರಿನಲ್ಲಿ ಹಾರಿ, ಈಜಿ,ದೋಣಿಗಳನ್ನು ಹಿಡಿದು ಅವುಗಳನ್ನು ಹತ್ತಿದರು. ನದೀಪಾತ್ರದಲ್ಲಿದ್ದ ಆ ನಲವತ್ತು ದೋಣಿಗಳಿಗೂ ಬೆಂಕಿ ಹಚ್ಚಿದರು. ಅವು ಹತ್ತಿ ಉರಿಯಲಾರಂಭಿಸಿದವು. ಅನೇಕ ಮಂದಿ ಫರಂಗಿಗಳು ಆರ್ತನಾದ ಮಾಡುತ್ತಾ ಸಜೀವವಾಗಿ ಉರಿದು ಹೋದರು. ಸಾಹಸ ಮಾಡಿ ನೀರಿನಲ್ಲಿ ಧುಮುಕಿದವರನ್ನು ಬಾಯಿ ನೆಟ್ಟಿಗಳಿಂದ ಘಾತಿಸಿ ಕೊಲ್ಲಲಾಯಿತು.

ಗಂಗಾನದಿಯಲ್ಲಿದ್ದ ದೋಣಿಗಳು ಹತ್ತಿ ಉರಿಯುತ್ತಿದ್ದುದನ್ನು ನೋಡಿ,ಘಾಟಿನಲ್ಲಿ ಬಹಳ ಗಲಭೆಯಾದುದನ್ನು ಕೇಳಿ, ಹರಮಹದೇವ ಮಂದಿರದ ಬಳಿ ಇದ್ದ ವಿಪ್ಲವದ ನಾಯಕರು ಸೋಪಾನಗಳನ್ನಿಳಿದು

ಕೆಳಗೆ ಬಂದರು. ಅಲ್ಲಿ ನಡೆಯುತ್ತಿದ್ದ ದಾರುಣವಾದ ದೃಶ್ಯಗಳನ್ನೂ ಅತಿ ರೌದ್ರಾಕಾರದಿಂದ ರಕ್ತಸಿಕ್ತವಾದ ಖಡ್ಗವನ್ನು ಹಿಡಿದು ಅಜೀಜಾಳು ನಿಂತಿರುವುದನ್ನೂ ನೋಡಿದರು. ಇದೆಲ್ಲವನ್ನೂ ನೋಡಿ ಚಕಿತರಾದರು.

ಅಜೀಮುಲ್ಲಾಖಾನನು "ಇದೇನು, ಅಜೀಜಾ!" ಎಂದು ಕೇಳಿದನು.

"ಕಾಶೀ, ಅಲಹಾಬಾದ್‌ಗಳಲ್ಲಿ ನೈಲ್ ಮಾಡಿದ ಅತ್ಯಾಚಾರಕ್ಕೆ ಪ್ರತೀಕಾರ"

ಪೇಶ್ವೆಗಳ ಸರ್ಕಾರವು ಫರಂಗಿಗಳನ್ನು ಸುರಕ್ಷಿತವಾಗಿ ಕಳಿಸಲೊಪ್ಪಿರುವಾಗ, ನಾವೆಲ್ಲರೂ ಇಲ್ಲೇ ಇರುವಾಗ, ಯಾರಿಗ ತಿಳಿಸದೇ ಇಂತಹ ಕೆಲಸವನ್ನು ಮಾಡಬಹುದೇ ?

"ಖಾನಜೀ! ನಿಜ. ಯಾರಿಗೂ ತಿಳಿಸದೇ ಮಾಡಿದ್ದೇವೆ. ನಮ್ಮ ಪ್ರತೀಕಾರವನ್ನು ತೀರಿಸಿಕೊಂಡಿದ್ದೇವೆ. ನಮ್ಮ ಮನೋರಥವಂತೂ ಕೈಗೂಡಿದೆ. ಬೇಕಾದರೆ ನೀವು ನಮ್ಮನ್ನು ವಿಚಾರಣೆ ಮಾಡಿ ಶಿಕ್ಷೆಗೆ ಗುರಿಪಡಿಸಬಹುದು. ಆನಂದದಿಂದ ಅದನ್ನು ಅನುಭವಿಸಲು ಸಿದ್ಧರಾಗಿದ್ದೇವೆ"

ಇನ್ನವರು ಪ್ರಶ್ನೆಗಳನ್ನು ಕೇಳಲಿಲ್ಲ. ಮರುಮಾತೂ ಆಡಲಿಲ್ಲ. ಆ ಮಾತುಗಳನ್ನು ಕೇಳಿ ವಿಪ್ಲವದ ನಾಯಕರು ಮೆಟ್ಟಲುಗಳನ್ನು ಹತ್ತಿ ಹೊರಟು ಹೋದರು. ಆದರೆ ಆ ರೌದ್ರ ಮೂರ್ತಿಯು ಉರಿಯುತ್ತಿದ್ದ ದೋಣಿಗಳನ್ನು ನೋಡುತ್ತಾ ಗಂಗಾತೀರದಲ್ಲಿಯೇ ನಿಂತಿದ್ದಳು.

## ಪೂರ್ವ ಸಿದ್ಧತೆಗಳು

ದೆಹಲೀ ನಗರದಲ್ಲಿ ವಿಪ್ಲವವುಂಟಾಗಿ ಅದು ಸ್ವತಂತ್ರವೆಂದು ಘೋಷಿಸಲಾಯಿತಷ್ಟೇ! ಭಾರತ ಸ್ವಾತಂತ್ರ್ಯ ಸಂಗ್ರಾಮದಿಂದುದ್ಭವಿಸಿದ ಸ್ವತಂತ್ರ ಸಿಂಹಾಸನವನ್ನು ಸ್ಥಾಪನೆಮಾಡಿ ಬಹದ್ದೂರ್ ಷಹನನ್ನು

ಅದರ ಮೇಲೆ ಕೂರಿಸಲಾಯಿತಷ್ಟೆ! ಅದು ಅಖಿಲ ಭಾರತದ ದೃಷ್ಟಿ ಯನ್ನೇ ದೆಹಲೀ ನಗರದ ಕಡೆಗೆ ಆಕರ್ಷಿಸಿತು. ಅನೇಕ ರಾಜರುಗಳೂ ರಾಜರೊಪ್ಪದಿರುವ ಕಡೆ ಸೈನ್ಯಗಳೂ, ಅವೆರಡೂ ತಟಸ್ಥ್ಯವಾಗಿದ್ದ ಕಡೆ ಯಿಂದ ಜನಗಳೂ ಈ ಸಿಂಹಾಸನದಲ್ಲಿ ಗೌರವವನ್ನು ವ್ಯಕ್ತಪಡಿಸಿದರು. ಅಯೋಧ್ಯೆ, ರೋಹಿಲಖಂಡ, ನೀಮುಚ್ ಮುಂತಾದ ಕಡೆಗಳಲ್ಲಿಯೂ ಪಂಜಾಬಿನ ವಿವಿಧ ಭಾಗಗಳಿಂದಲೂ ವಿಪ್ಲವ ಮಾಡಿದಂತಹ ಸೇನೆಗಳು ಸ್ವತಂತ್ರ ಧ್ವಜಗಳನ್ನು ಹಾರಿಸುತ್ತಾ ದೆಹಲಿಗೆ ಬಂದು ಬಹದ್ದೂರ್ ಷಹನ ಆಜ್ಞೆಗಾಗಿ ಕಾಯುತ್ತಾ ನಿಂತರು. ಬಂದ ಈ ಸೇನೆಗಳು ತಾವಿದ್ದ ಕಡೆ ಕುಂಪಣಿ ಸರ್ಕಾರದ ಖಜಾನೆಗಳನ್ನೂ ದಾರಿಯಲ್ಲಿ ಬರುವಾಗ ಕಂಡ ಫರಂಗಿಯವರ ಆಸ್ತಿಗಳನ್ನೂ ಲೂಟಿಮಾಡಿ ದೆಹಲಿ ಸಿಂಹಾಸನದ ತಲದಲ್ಲಿ ಆ ದ್ರವ್ಯರಾಶಿಯನ್ನು ಸುರಿದರು.

ಭಾರತದ ರಾಜಧಾನಿಯಾದ ದೆಹಲೀ ನಗರವು ಸ್ವತಂತ್ರವಾಗಿದ್ದಿತು ಭಾರತದ ಅನೇಕ ಭಾಗಗಳು ಕುಂಪಣೀ ಸರ್ಕಾರವನ್ನು ನಡಯದಂತೆ ಮಾಡಿ ಫರಂಗಿಗಳನ್ನು ಘಾತಿಸಿದ್ದವು. ಆದರೂ ಮಹಾತ್ಯಾಗದಿಂದ ಸಂಪಾದನೆ ಮಾಡಿದಂತಹ ಸ್ವತಂತ್ರವನ್ನು ಸಾಹಸೋಪೇತವಾದ ಬಲಿ ದಾನದಿಂದ ಉಳಿಸಿಕೊಳ್ಳಬೇಕಾಗಿದ್ದಿತು. ಬಹದ್ದೂರ್ ಷಹನು ಹಿಂದೂ ಸ್ಥಾನದ ಪ್ರತಿಯೊಬ್ಬ ಮಾನವನನ್ನು ಉದ್ದೇಶಮಾಡಿ ಬಂದು ಘೋಷಣೆ ಯನ್ನು ಮಾಡಿದನು. ಹಿಂದೂಸ್ಥಾನದಲ್ಲಿ ಬ್ರಿಟಿಷರ ಆಡಳಿತವು ನಿರ್ಮೂ ಲವಾಗಿದೆ ಎಂದೂ ಆ ಸ್ವತಂತ್ರವನ್ನುಳಿಸಿಕೊಳ್ಳುವದು ಪ್ರತಿಯೊಬ್ಬ ಭಾರತೀಯನ ಪವಿತ್ರ ಕರ್ತವ್ಯವಾಗಿದೆ ಎಂದೂ ಅದರಲ್ಲಿ ಹೇಳಲಾಗಿ ದ್ದಿತು—ಪ್ರತಿಯೊಬ್ಬರ ಹೃದಯಗಳನ್ನು ಕಲಕುವಂತಹ ಮಾತುಗಳಿಂದ ಬಹದ್ದೂರ್ ಷಹನು "ಧರ್ಮಸಂರಕ್ಷಣೆಗಾಗಿ ಎಲ್ಲರೂ ಖಡ್ಗಧಾರಣೆ ಮಾಡಲಿ! ವಿವೇಕಗಳೇ! ಪ್ರಾಣ ಮತ್ತು ಆಸ್ತಿಯ ಮೇಲಿನ ಆಸೆಯನ್ನು ಬಿಟ್ಟು ನಿಮ್ಮ ಧರ್ಮಗಳನ್ನು ಉಳಿಸಿಕೊಳ್ಳಿರಿ! ನೀವೆಲ್ಲರೂ ಸ್ವಾರ್ಥ ವನ್ನು ತ್ಯಜಿಸಿ ದೇಶಸೇವೆ ಮಾಡಿದರೆ ಭಾರತದಲ್ಲಿ ಬ್ರಿಟಿಷರು ಒಂದುಗಳಿ ಗೆಯೂ ನಿಲ್ಲಲಾಗುವುದಿಲ್ಲ. ಯಾರೊಬ್ಬರೂ ಸಾಯುವ ಕಾಲವು ಬರದೇ ಸಾಯುವುದಿಲ್ಲ. ಸಾಯುವ ಕಾಲವು ಬಂದ ಮೇಲೆ ಬದುಕುವುದಿಲ್ಲ ಕೆಲವು ದಿನಗಳ ಹಿಂದೆ ಕಾಲರಾದಿಂದಲೂ ಇತರ ವ್ಯಾಧಿಗಳಿಂದಲೂ ಸಹ

ಸ್ರಾರು ಜನರು ಸಾಯ:ಲಿಲ್ಲವೇ? ಹಾಗಿರುವಾಗ ಧರ್ಮ ಯುದ್ಧದಲ್ಲಿ ಅಸುವನ್ನು ನೀಗಿ ವೀರ ಸ್ವರ್ಗವನ್ನು ಪಡೆಯಲು ಯೋಚನೆಮಾಡುವಿರೇಕೆ? ಭಾರತದ ಪ್ರತಿಯೊಬ್ಬ ಸ್ತ್ರೀಪುರುಷರೂ ಫರಂಗಿಗಳನ್ನು ಕೊಲ್ಲುವ ಮತ್ತು ಭಾರತದಿಂದ .ಹೊರಡಿಸುವ ಈ ಮಹತ್ಕಾರ್ಯದಲ್ಲಿ ಬಂದು ಸೇರಲಿ. ಈ ಕಾರ್ಯದಿಂದ ಇಹಲೋಕದ ಸುಖಸೌಭಾಗ್ಯಗಳು ಬರುವುದಾದರೂ ಸಹ ನನ್ನ ಜೊತೆ ಸೇರುವವರಿಗೆ ಧರ್ಮೋದ್ಧಾರದ ಆಸೆಯೊಂದು ಮಾತ್ರ ಇರಲಿ" ಎಂದು ಘೋಷಣೆ ಮಾಡಿದನು.

ಈ ಘೋಷಣಾ ಪತ್ರಗಳು ಭಾರತದದ ಮುಖ್ಯವಾದ ನಗರಗಳಲ್ಲೆಲ್ಲಾ ಮುದ್ರಿಸಲ್ಪಟ್ಟು ಪ್ರಕಟಿಸಲ್ಪಟ್ಟವು. ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ಅಂಗಡೀ ಬೀದಿಗಳಲ್ಲಿಯೂ-ಸೈನ್ಯ ಶಿಬಿರಗಳಲ್ಲಿಯೂ ಒಬ್ಬರಿಂದ ಮತ್ತೊಬ್ಬರು ಇದನ್ನು ತೆಗೆದುಕೊಂಡು ಓದಿದರು.

ಇದರಿಂದ ಯಾವ ಬಗೆಯಾಗಿ ಜನಗಳಲ್ಲಿ ನವಚೇತನವುಂಟಾಯಿತೆಂಬುವನ್ನು ಭಾರತದ ಸ್ವಾತಂತ್ರ ಸಂಗ್ರಾಮಕ್ಕೆ ಈ ಮಹಾ ಘೋಷಣೆಯು ಯಾವ ರೀತಿಯಾಗಿ ಹುರುಪು ಕೊಟ್ಟಿತ್ತೆಂಬುದನ್ನು ಬರೆಯುತ್ತಾ ಹೋದರೆ ಅದು ವಿಸ್ತಾರವಾದ ಚರಿತ್ರೆಯಾಗುತ್ತದೆ. ದೆಹಲಿ ನಗರಕ್ಕೆ ಸಶಸ್ತ್ರರಾದ ಸೈನಿಕರೂ ನಾಗರಿಕರೂ ಪ್ರತಿದಿನವೂ ಸಹಸ್ರಗಟ್ಟಲೆಯಾಗಿ ಬರುತ್ತಿದ್ದರೆಂದರೆ ಭಾರತದ ಅಂದಿನ ಸ್ಥಿತಿಯನ್ನು ಒಂದೇ ಒಂದು ಮಾತಿನಲ್ಲಿ ಹೇಳಿದಂತಾಗುತ್ತದೆ.

ಇಂತಹ ಸಮಯದಲ್ಲಿ ದೆಹಲಿಯು ಸುಮ್ಮನೆ ಕುಳಿತಿರಲಿಲ್ಲ. ದೆಹಲಿಗೆ ಬಂದಂತಹ ಸೈನಿಕರು ಸುಮ್ಮನೆ ಕುಳಿತುಕೊಳ್ಳಲಿಲ್ಲ. ಭಾರತಾದ್ಯಂತವೂ ನಡೆಯುತ್ತಿದ್ಧ ಫರಂಗಿಗಳ ಮೇಲಿನ ಈ ಮಹಾಯುದ್ಧಕ್ಕೆ ಕೇಂದ್ರ ಸ್ಥಾನವಾಗಿದ್ಧ ದೆಹಲಿಯಲ್ಲಿ ವಿಪ್ಲವಕಾರರು ಆಯುಧಗಳನ್ನು ಮದ್ದುಗುಂಡುಗಳನ್ನೂ ತಯಾರು ಮಾಡಲಾರಂಭಿಸಿದರು. ತೋಪು ಬಂದೂಕುಗಳನ್ನು ಮಾಡುವ ಕಾರ್ಖಾನೆಗಳು ಮೊದಲಾದವು. ಫ್ರೆಂಚರು ಈ ಕೆಲಸಗಳಲ್ಲಿ ಆಸಕ್ತಿಯನ್ನು ವಹಿಸಿ ಮೇಲ್ವಿಚಾರಕರಾಗಿದ್ದರು. ಜನಗಳು ಹಗಲೂ ರಾತ್ರಿಯೂ ಯುದ್ಧ ಕಾರ್ಯಗಳಲ್ಲಿ ಮಗ್ನರಾಗಿದ್ಧರು.

ಹೀಗೆ ಮಧ್ಯ ಭಾತರವೇ ಹತ್ತಿ ಉರಿಯುತ್ತಿದ್ದ ಸನ್ನಿವೇಶದಲ್ಲಿ ಫರಂಗಿಗಳು ದಿಕ್ಕೇ ತೋಚದವರಾಗಿದ್ದರು. ದಕ್ಷಿಣದಲ್ಲಿ-ಇನ್ನೂ ವಿಪ್ಲ

ವದ ಜ್ವಾಲೆಗಳು ಹತ್ತಿಕೊಳ್ಳದೇ ಇದ್ದರೂ ಸಹ ಆರಂಭವಾದ ಸ್ವಾತಂತ್ರ್ಯ ಯುದ್ಧದಲ್ಲಿ ಅವರು ನಿಲ್ಲುವುದೇ ಕಷ್ಟವಾಗಿದ್ದಿತು. ಕಲ್ಕತ್ತಾದಲ್ಲಿ ಪ್ರತ್ಯಕ್ಷವಾಗಿ ಯುದ್ಧವು ಪ್ರಾಪ್ತವಾಗದೇ ಇದ್ದರೂ ಅಲ್ಲಿ ಹೊಗೆಯಾಡುತ್ತಿದ್ದುದರಿಂದ ಅದನ್ನು ನೆಚ್ಚಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ.

ಪಂಜಾಬ್‌ನಲ್ಲಿಯೂ ಸಹ ಅಲ್ಲಲ್ಲಿ ವಿಪ್ಲವಗಳಾದವು. ಅಲ್ಲಿ ಸೈನಿಕರು ತಾವು ಸ್ವತಂತ್ರರೆಂದು ಘೋಷಣೆಮಾಡಿ, ಅವರು ನೇರವಾಗಿ ದೆಹಲಿಗೆ ಬಂದು ಬಿಟ್ಟರು. ಪಂಜಾಬಿನಲ್ಲಿದ್ದ ಅನೇಕ ದೇಶೀಯ ಸಂಸ್ಥಾನಗಳೂ ಕುಂಪಣಿಯವರ ಬಲವಾದ ಮಿಲ್ಟ್ರಿ ಕೇಂದ್ರಗಳೂ ಶಾಂತವಾಗಿದ್ದವು. ಆದರಿಂದ ಪಂಜಾಬು ಫರಂಗಿಯವರಿಗೆ ಬೆನ್ನು ಮೂಳೆಯಂತಿದ್ದಿತು. ಕುಂಪಣಿಯವರು ಪಂಜಾಬನ್ನೇ ಮೂಲಸ್ಥಾನವಾಗಿ ಮಾಡಿಕೊಂಡಿದ್ದರು. ಇದಕ್ಕೆ ಮುಖ್ಯವಾಗಿ ಸಿಕ್ಕರು ಅವರಿಗೆ ಬೆಂಬಲವಾಗಿ ನಿಂತರು. ಕಮಾಂಡರ್ ಬರ್ನಾರ್ಡ್ ಇಂಗ್ರೇಜೀ ಮತ್ತು ಸಿಕ್ ದಳಗಳನ್ನು ತೆಗೆದುಕೊಂಡು ದೆಹಲಿಯ ಕಡೆಗೆ ಹೊರಟನು. ಆ ದೀರ್ಘವಾದ ಮಾರ್ಗದಲ್ಲಿ ವಿಪ್ಲವಕಾರರು ಮುತ್ತಿ ಫರಂಗಿಯವರನ್ನು ಘಾತಿಸಲು ಅವಕಾಶಗಳು ಎಷ್ಟೋ ಇದ್ದವು. ಅಂತಹ ಸಂದರ್ಭಗಳೂ ಬಂದೊದಗಿದವು. ಆದರೆ ಪಂಜಾಬಿನ ಸಿಕ್ ಸಂಸ್ಥಾನಗಳು ಮಾರ್ಗದಲ್ಲಿ ಕುಂಪಣಿಯ ಸೈನ್ಯಗಳಿಗೆ ಯುದ್ಧವು ಬಂದೊದಗದಂತೆ ತಮ್ಮ ಸೈನ್ಯಗಳನ್ನು ತಂದು ಕಾಯುತ್ತಿದ್ದವು. ಅವರ ಮಾರ್ಗಗಳು ಕಡಿದು ಹೋಗದಂತೆ ಸಂರಕ್ಷಿಸುತ್ತಿದ್ದವು. ಪಂಜಾಬಿನ ಮಿಲಿಟರಿ ಕೇಂದ್ರಗಳಿಂದ ದೆಹಲಿಯ ವರೆವಿಗೆ ಇರುವ ಮಾರ್ಗಗಳೆಲ್ಲವೂ ಇಂಗ್ರೇಜಿಯವರ ಪಾಲಿಗೆ ತೆರೆದ ಬಾಗಿಲಿನಂತಿದ್ದವು. ಈ ಸಿಕ್ ರಾಜರುಗಳೇ ಯುದ್ಧ ಸಾಮಗ್ರಿಗಳನ್ನೂ ಆಹಾರ ಪದಾರ್ಥಗಳನ್ನೂ ತಂದು ಇಂಗ್ರೇಜೀ ಸೈನ್ಯಕ್ಕೆ ಒದಗಿಸುತ್ತಿದ್ದರು.

ಹೀಗೆ ಕಮಾಂಡರ್ ಬರ್ನಾರ್ಡ್‌ನ ಸೇನೆಗಳು ದೆಹಲಿಯ ಪರಿಸರಕ್ಕೆ ಬಂದವು. ವಿಪ್ಲವಕಾರರು ತಮ್ಮ ಸೈನ್ಯಗಳನ್ನು ತೆಗೆದುಕೊಂಡು ಹೋಗಿ ಬದ್ಲೀ ಕೀ ಸಾರೈ ಎಂಬ ಕಡೆ ಫರಂಗಿಗಳನ್ನು ಎದುರಿಸಿದರು. ಅಂದು ವಿಪ್ಲವದ ಸೈನ್ಯಕ್ಕೆ ಮಿರ್ಜಾಮೊಗಲ್ ಸೇನಾಧಿಪತಿಯಾಗಿದ್ದನು.

ಯುದ್ಧವು ಘೋರರೂಪದಿಂದ ಆರಂಭವಾಯಿತು. ಜಯಘೋಷ ಗಳಾದವು. ಎರಡು ಸೇನೆಗಳೂ ಬಂದು ಘರ್ಷಿಸಿದವು. ಅರಣ್ಯದಲ್ಲಿ ದಳ್ಳುರಿಯು ಹತ್ತಿದಾಗ ಮರಗಳು ಒಡೆಯುವ ಕಟಕಟ ಶಬ್ದವು ಕೇಳಿ ವಂತೆ ಗುಂಡುಗಳು ಹಾರಿದವು. ಆಗಾಗ ಹೃದಯಗಳು ಕಂಪಿಸುವಂತೆ ತೋಪುಗಳು ಭೋರ್ಗರೆಯುತ್ತಿದ್ದವು.

ಮೊಗಲ್ ರಾಜವಂಶವು ಯುದ್ಧಮಾಡಿ ಬಹಳ ದಿನಗಳಾಗಿದ್ದವು. ವೀರಪುರುಷರಾಗಿದ್ದ ಅವರು ವಿಲಾಸಿಗಳಾಗಿ ಹೋಗಿದ್ದರು. ರಾಜಕು ಮಾರನಾದ ಮಿರ್ಜಾಮೊಗಲ್‌ನಿಗೆ ಆ ಭಯಂಕರವಾದ ಯುದ್ಧ ರಂಗ ವನ್ನು ನೋಡಲಾಗಲಿಲ್ಲ. ಸಿಡಿಲಿನಂತೆ ಆರ್ಭಟಿಸುವ ತೋಪುಗಳ ಶಬ್ದ ವನ್ನೂ ಸಹಿಸಲಾಗಲಿಲ್ಲ. ಅವನು ಯುದ್ಧರಂಗವನ್ನು ತ್ಯಾಗಮಾಡಿ ಓಡಿ ಹೋದನು. ಅವನು ಹೊರಟು ಹೋದನಂತರ ಯುದ್ಧವು ನಿಂತು ಹೋಗಲಿಲ್ಲ. ಅನಂತರವೂ ನಡೆಯಿತು. ಆದರೆ ಸೇನಾನಾಯಕ ನಿಲ್ಲದ ವಿಪ್ಲವ ಸೈನ್ಯಗಳು ಸುಸಂಘಟಿತವಾದ ಫರಂಗೀ ಸೈನ್ಯದೊಡನೆ ಕಾದಿ ಜಯಿಸಲಾರದೇ ಹೋದವು. ಫರಂಗೀ ಸೈನ್ಯಗಳು ಬದ್ಲೀ – ಕೀ –ಸಾರೈನಿಂದ ಮುಂದೆ ಬಂದವು. ದೆಹಲೀ ನಗರದ ಸಮೀಪದಲ್ಲಿ, ಯಮುನಾತಟದ ವಿಶಾಲವಾದ ಮೈದಾನವೊಂದರಲ್ಲಿ ಬೀಡು ಬಿಟ್ಟರು.

## ಭಖತ್ ಖಾನನ ಅಧಿಕಾರ ಸ್ವೀಕಾರ

ರೋಹಿಲ ಖಂಡವೂ ಸಹ ಆ ಕಾಲದಲ್ಲಿ ಸ್ವತಂತ್ರವಾಯಿತು. ಅದು ಸ್ವತಂತ್ರವಾದ ಬಗೆಯು ಅಂದಿಗೂ ಇಂದಿಗೂ ಎಂದೆಂದಿಗೂ ಆದ ರ್ಶವಾದುದು. ಒಂದೇ ಒಂದು ದಿನದಲ್ಲಿ, ಒಬ್ಬನೇ ಒಬ್ಬ ಮನುಷ್ಯನು ಮೇಲೆದ್ದು ನಿಂತಂತೆ ರೋಹಿಲ ಖಂಡವು ಸ್ವತಂತ್ರವಾಯಿತು. ಇದ ಕ್ಕಾಗಿ ಯಾವ ಭಾರತೀಯನೂ ಬಲಿದಾನ ಮಾಡಬೇಕಾಗಿ ಬರಲಿಲ್ಲ. ರೋಹಿಲ ಖಂಡವು ತಾನು ದಾಸ್ಯದಲ್ಲಿದ್ದೇನೆಂದು ಹೇಳುತ್ತಿದ್ದುದು ಒಂದು ದಿನ ತಾನು ಸ್ವತಂತ್ರವೆಂದು ಹೇಳಿತು. ಅದು ಸ್ವತಂತ್ರವಾಗಿ ಹೋಯಿತು.

ಅಲ್ಲಿ ಅತಂಹ ಮಹತ್ತರವಾದ ಸಂಘಟನೆಯನ್ನು ಮಾಡಿದ್ದವನು ಭಕತ್‌ಖಾ. ರೋಹಿಲ ಖಂಡದಲ್ಲಿ ಸೈನ್ಯವೂ, ಪೋಲೀಸೂ, ಜನಗಳೂ ಎಲ್ಲರೂ ಆ ಸ್ವಾತಂತ್ರ್ಯೋತ್ಸವದಲ್ಲಿ ಸೇರಿ ಹೋದರು. ಅಲ್ಲಿ ಕುಂಪಣಿಯ ಸರ್ಕಾರವನ್ನು ನಾಮಾವೇಶಮಾಡಿ, ಸ್ವತಂತ್ರ ಸರ್ಕಾರವನ್ನು ಸ್ಥಾಪಿಸಿ, ಅವಶ್ಯಕವಾದ ಏರ್ಪಾಡುಗಳನ್ನು ಮಾಡಿ, ಅದರ ರಕ್ಷಣೆಗೆ ಬೇಕಾದಷ್ಟು ಸೈನ್ಯವನ್ನಿಟ್ಟು, ಭಕತ್‌ಖಾ ಉಳಿದ ದೊಡ್ಡ ಸೈನ್ಯವನ್ನು ತೆಗೆದುಕೊಂಡು ದೆಹಲಿಯ ಕಡೆಗೆ ಹೋದನು.

ಭಕತ್‌ಖಾ ನಂತಹ ವೀರನು ದೆಹಲಿಗೆ ಹೋಗುತ್ತಿರುವನೆಂಬ ವರ್ತಮಾನವನ್ನು ಕೇಳಿ ವಿಪ್ಲವಕಾರರೆಲ್ಲರೂ ಆನಂದ ಪಟ್ಟರು. ಇದುವರೆವಿಗೂ ದೆಹಲಿಯಲ್ಲಿ ಮಹಾ ಸೇನಾನಿಯೊಬ್ಬನಿಲ್ಲವೆಂದಿದ್ದ ಲೋಪವು ಪರಿಹೋಯಿತೆಂದು ಕೊಂಡರು. ಖಾನನು ಬರುವುದು ದೆಹಲಿಯಲ್ಲಿಯೂ ಸಹ ಹರ್ಷವನ್ನುಂಟು ಮಾಡಿತ್ತು. ಎಲ್ಲರೂ ಅವನ ಆಗಮನವನ್ನೇ ಎದುರು ನೊ ಡುತ್ತಿದ್ದರು.

ದೆಹಲಿಯು ಯುದ್ಧಮಗ್ನವಾಗಿರುವಾಗ ಒಂದು ದಿನ ಭಕತ್‌ಖಾನನು ತನ್ನ ಸೈನ್ಯ ಸಮೇತವಾಗಿ ದೆಹಲಿಗೆ ಬಂದನು. ಅವನು ಪ್ರಾತಃಕಾಲ ಒಂಬತ್ತು ಗಂಟೆಯ ವೇಳೆಗೆ ದೆಹಲಿ ನಗರದ ಮಹಾದ್ವಾರದ ಬಳಿ ಬಂದು ತಲುಪಿದನು. ಬಾದಷನ ಹಕೀಮನಾದ ಅಷನುಲ್ಲಾಖಾನನೂ ಸೇನಾಧಿಪತಿಗಳಾದ ಸನ್ನದ್‌ಖಾನ್, ಇಂಬ್ರಾಹಿಂ ಆಲೀಖಾ ಮುಂತಾದವರುಗಳು ಬಂದು ಅವನನ್ನೂ ಅವನ ಸೈನ್ಯವನ್ನೂ ಸ್ವಾಗತಿಸಿದರು.

ಭಕತ್‌ಖಾನನು ದೆಹಲೀ ನಗರವನ್ನು ಪ್ರವೇಶಿಸುವುದನ್ನು ನೋಡ್ರುವುದಕ್ಕೆ ದೆಹಲಿಯು ಜನಗಳೂ ಸೈನಿಕರೂ ಬಂದಿದ್ದರು. ದೆಹಲೀ ನಗರದಲ್ಲೆಲ್ಲಾ ಮೆರವಣಿಗೆಯಾಯಿತು. ಇಷ್ಟೊಂದು ಗೌರವದಿಂದ ಭಕತ್ ಖಾನನ್ನು ಕರತರುವುದನ್ನು ಬಾದಷಹನು ರಾಜ ಮಂದಿರದ ವಾತಾಯನದಿಂದ ನೋಡಿ ಆನಂದಿಸಿದನು.

ಎಂದಿನಂತೆಯೇ ಆ ದಿನ ಪ್ರಾತಃಕಾಲದ ದರಬಾರು ಸೇರಿತು. ಭಕತ್ ಖಾನನಿಗೆ ಅಂದಿನ ದರಬಾರಿಗೆ ಬರಬೇಕೆಂದು ಪ್ರತ್ಯೇಕವಾದ ಆಹ್ವಾನವು ಬಂದಿದ್ದಿತು. ಅವನು ತನ್ನ ಸೈನ್ಯದ ಕೆಲವು ಮಂದಿ ದಳಪತಿಗಳನ್ನೂ ಕರೆದುಕೊಂಡು ಅಂದಿನ ದರಬಾರಿಗೆ ಹೋದನು.

ರಾಜಮಂದಿರದಲ್ಲಿ ಏರ್ಪಾಟಾಗಿದ್ದ ದರ್ಬಾರಿಗೆ ಅಷ್ಟು ಹೊತ್ತಿಗಾಗಲೇ ವಿಪ್ಲವದ ನಾಯಕರು ಬಂದು ನೆರೆದಿದ್ದರು. ಅರಮನೆಯ ರಾಜೋದ್ಯಾನದ ಪಕ್ಕದಲ್ಲಿ ಅಮೃತ ಶಿಲೆಯ ಚಚ್ಚೌಕವಾದ ಕಲ್ಲುಗಳಿಂದ ನಿರ್ಮಿತವಾದ ಜಗುಲಿ. ಆ ಜಗುಲಿಯ ಮೇಲೆ ಒಂದರ ಪಕ್ಕದಲ್ಲಿ ಒಂದು ಸಾಲಾಗಿ ಅನೇಕ ಬಾಗಿಲುಗಳು. ಆ ಬಾಗಿಲುಗಳನ್ನು ದಾಟಿ ಬಂದರೆ ಹಾಗೆಯೇ ಸಾಲುಬಾಗಿಲುಗಳು. ಆ ಬಾಗಿಲುಗಳ ನಡುವೆ ಉದ್ದವಾದ ಒಂದು ನಡುವೆ ಅದಕ್ಕೆ ಅಗಲವಾದ ಕರಿಯ ಕಲ್ಲನ್ನು ಹಾಸಿದ್ದಾರೆ. ಅದು ಹೊಳೆಯುತ್ತಾ ಮಿಣಿ ಮಿಣಿಗುಟ್ಟುತ್ತದೆ. ಅರ್ಧ ಕಮಲಾಕೃತಿಯಂತಿದ್ದ ಬಾಗಿಲುಗಳ ಮೇಲು ಭಾಗಕ್ಕೆ ಮುತ್ತಿನ ತೋರಣಗಳನ್ನು ಕಟ್ಟಿ,ಎರಡು ಪಾರ್ಶ್ವಗಳಲ್ಲಿಯೂ ಅಪೂರ್ವವಾದ ಗಜ್ಜುಗದ ಗಾತ್ರದ ಮುತ್ತುಗಳನ್ನು ಗೊಂಚಲು ಗೊಂಚಲಾಗಿ ಕಟ್ಟಿದ್ದಾರೆ.

ಆ ಎರಡು ಸಾಲು ಬಾಗಿಲುಗಳನ್ನು ದಾಟಿದರೆ ಅಲ್ಲಿ ಪ್ರಶಸ್ತವಾದ ಒಂದು ಹಜಾರ. ಆ ಹಜಾರದಲ್ಲಿ ಮೂರು ಕಡೆಯೂ ಎಳೆಗೆಂಪು ಬಣ್ಣದ ಸೊಗಸಾದ ರೇಶಿಮೆಯ ಪರದೆಗಳನ್ನು ಇಳಿಬಿಟ್ಟಿದ್ದಾರೆ. ಉತ್ತಮವಾದ ಜರಿಯ ಹಗ್ಗಗಳಿಂದ ಆ ಪರದೆಗಳನ್ನು ಎತ್ತಿ ಕಟ್ಟಲಾಗಿದೆ. ಬಾಗಿಲುಗಳಿಂದ ಬಂದ ಪ್ರಕಾಶಮಾನವಾದ ಬೆಳಕು ಅದರ ಮೇಲೆ ಬಿದ್ದು ಆ ಹಜಾರದಲ್ಲಿ ರತ್ನಪ್ರಭೆಯನ್ನುಂಟು ಮಾಡಿದೆ.

ಅಲ್ಲಿ, ಒಂದು ಕಡೆ, ಪುಷ್ಪಕ ವಿಮಾನದಂತೆ ನಿರ್ಮಿತವಾಗಿರುವ ಒಂದು ಮಂಟಪ. ಪಚ್ಚೆಗಳಿಂದ ಕಡದದ್ದೋ ಎಂಬಂತೆ ಕಂಡು ಬರುವ ಆ ಮಂಟಪದ ಮೇಲುಗಡೆ ನಾಲ್ಕು ಕಡೆಯೂ ಚಿನ್ನದ ಕಲಶಗಳು ಆ ಮಂಟಪದ ಮಧ್ಯದಲ್ಲಿ ವಜ್ರಗಳಿಂದ ಕೆತ್ತಲ್ಪಟ್ಟ ಸಿಂಹಾಸನ.

ಆ ಸಿಂಹಪೀಠದ ಬಲಗಡೆಯಲ್ಲಿ ಮಹಾ ನಾಯಕರಿಗಾಗಿಯೂ ದಳಪತಿಗಳಿಗಾಗಿಯೂ ಉತ್ತಮಾಸನಗಳನ್ನು ಅಳವಡಿಸಿಟ್ಟಿದ್ದಾರೆ. ಅದರ ಎದುರಿನಲ್ಲಿ ಮಹಾಜನರಿಗಾಗಿ ಅನರ್ಘವಾದ ರತ್ನ ಕಂಬಳಿಗಳನ್ನು ಹಾಸಿದ್ದಾರೆ. ಸಿಂಹಾಸನದ ಎದುರಿನಲ್ಲಿ ಕೇವಲ ದರಬಾರಿನ ಮರ್ಯಾದೆಗಾಗಿ ಸಕಲ ವಿಧವಾದ ವಾದ್ಯ ವಿಶೇಷಗಳನ್ನು ಇಟ್ಟಿದ್ದಾರೆ. ಗಾಯಕರೂ ನರ್ತಕಿಯರೂ ಅಲ್ಲಿ ಸಿದ್ಧವಾಗಿದ್ದಾರೆ.

ದರಬಾರು ಪ್ರಾತಃಕಾಲ ಹತ್ತು ಗಂಟೆಗೆ ಆರಂಭವಾಗಬೇಕಾಗಿತ್ತು. ಹತ್ತು ಹದಿನೈದು ನಿಮಿಷಗಳ ಮೊದಲೇ ದಳಪತಿಗಳೂ, ನಾಯಕರೂ, ಮಹಾಜನಗಳೂ ಬಂದು ನೆರೆದಿದ್ದರು. ಹಕೀಂಅಹಸನುಲ್ಲಾಖಾನರು ಭಕತ್ ಖಾನರನ್ನು ದರಬಾರಿಗೆ ಕರೆದುಕೊಂಡು ಬಂದು ಸಿಂಹಾಸನದ ಬಲಗಡೆಯಲ್ಲಿ ಅಗ್ರಾಸನದಲ್ಲಿ ಕೂರಿಸಿದ್ದನು.

ಜಯಘೋಷಗಳಾಗಿ ಮಂಗಳ ವಾದ್ಯಗಳೂ ಮೊಳಗುತ್ತಲಿರಲು ಸಮಯಕ್ಕೆ ಸರಿಯಾಗಿ ಬಹದ್ದೂರ್‌ಷಹನು ಬಂದು ಸಿಂಹಾಸನದ ಮೇಲೆ ಮಂಡಿಸಿದನು. ಬಾದಷಹನನ್ನು ವಂದಿಸಿ ಸಭಿಕರೆಲ್ಲರೂ ತಮ್ಮ ತಮ್ಮ ಆಸನಗಳಲ್ಲಿ ಕುಳಿತುಕೊಂಡರು. ಅಂದಿನ ದರಬಾರಿನಲ್ಲಿ ಭಕತ್‌ಖಾನನು ಬಂದ ವಿಷಯವೇ ಪ್ರಾಮುಖ್ಯವಾದುದಾಗಿತ್ತು. ಹಕೀಂ ಅಹಸನುಲ್ಲಾಖಾನರು ಎದ್ದು ನಿಂತು ವಂದಿಸಿ "ಬಾದಷಹ! ರೋಹಿಲ ಖಂಡವು ಬ್ರಿಟಿಷ್ ದಾಸ್ಯ ಶೃಂಖಲೆಗಳನ್ನು ಕಿತ್ತೊಗೆದು ಸ್ವತಂತ್ರವಾಗಿದೆ. ದೆಹಲಿಯ ಸ್ವತಂತ್ರ ಸಿಂಹಾಸನದ ಆಶ್ರಯವನ್ನು ಹೊಕ್ಕು ಕೃತಾರ್ಥವಾಗಿದೆ ಅಲ್ಲಿ ತಕ್ಕ ಬಂದೋಬಸ್ತುಮಾಡಿ ಭಕತ್‌ಖಾನರು ಸೈನ್ಯ ಸಮೇತವಾಗಿ ದೆಹಲಿಗೆ ಬಂದಿದ್ದಾರೆ " ಎಂದು ಅರಿಕೆಮಾಡಿದನು.

ಅನಂತರ ಭಕತ್ ಖಾನನು ಎದ್ದು ಮಾತನಾಡಿದನು. ರೋಹಿಲ ಖಂಡವು ಸ್ವತಂತ್ರವಾದ ವಿಧಾನವನ್ನು ವಿವರಿಸಿದನು. ರೋಹಿಲ ಖಂಡಕ್ಕೆ ಏನೂ ಭಯವಿಲ್ಲವೆಂದೂ, ಅತ್ತ ಕಡೆ ಕಣ್ಣೆತ್ತಿ ನೋಡುವ ಧೈರ್ಯವು ಸಹ ಫರಂಗಿಗಳಿಗೆ ಇಲ್ಲವೆಂದೂ ಹೇಳಿದನು.

ಬಾದಷಹನು " ಭಕತ್‌ಖಾ ! ರೋಹಿಲ ಖಂಡವು ಸ್ವತಂತ್ರವಾದ ವಿಧಾನವು ಸಮಗ್ರ ಭಾರತವರ್ಷಕ್ಕೆ ಆದರ್ಶಕರವಾಗಿದೆ. ಭಾರತೀಯರು ಸತ್ವಶಾಲಿಗಳಾಗಿ ಹೂಂಕರಿಸಿದ ಮಾತ್ರದಿಂದಲೇ ದಾಸ್ಯಶೃಂಖಲೆಗಳು ಯಾವ ರೀತಿ ಕಳಚಿ ಬೀಳುವುದೆಂಬುದನ್ನು ನೀವು ಮಾಡಿ ತೋರಿಸಿದ್ದೀರಿ. ಇಂದು ಭಾರತದಲ್ಲಿ ಅನೇಕ ಕಡೆ ವಿಪ್ಲವದ ಜ್ವಾಲೆಗಳು ಉರಿಯುತ್ತಿದೆ. ಪರದಾಸ್ಯವು ಉರಿದು ಹೋಗುತ್ತಿದೆ. ಆದರೂ ಸಂಪೂರ್ಣವಾಗಿ ಬ್ರಿಟಿಷರು ಪರಾಜಿತರಾಗಿಲ್ಲ. ಅದು ನನ್ನ ಮನಸ್ಸಿನಲ್ಲಿ ಕೊರೆಯುತ್ತಿದೆ. ರೋಹಿಲ ಖಂಡದಂತೆಯೇ ಸಮಗ್ರ ಭಾರತವೂ ಸ್ವತಂತ್ರವಾಗುವುದು ಸಾಧ್ಯವಾದರೂ, ನಾವೊಂದು ಮಹಾಯುದ್ಧವನ್ನು ನಿರ್ವಹಿಸಾ

ಮಾಡಬೇಕಾಗಿದೆ. ಆ ಕ್ಷೇತ್ರವಂತೂ ಸಿದ್ಧವಾಗಿದೆ. ಆ ಪವಿತ್ರವಾದ ಕಾರ್ಯವು ನಿಮ್ಮಗಳಿಂದ ಈಡೇರಬೇಕಾಗಿದೆ" ಎಂದು ಹೇಳಿದನು.

ಖಾನನು ಪುನಃ ಮೇಲೆದ್ದು "ಷಹಾಷಹ! ರೋಹಿಲ ಖಂಡದಿಂದ ನಾವು ಪಾದಸೇವೆಗಾಗಿ ಬಂದಿದ್ದೇವೆ. ಈ ದಿವವೇ ಬೇಕಾದರೂ ರಣಾಂಗಣ ವನ್ನು ಪ್ರವೇಶ ಮಾಡಲು ಸಿದ್ಧರಾಗಿದ್ದೇವೆ. ಅವಶ್ಯಕವಾದಲ್ಲಿ ನಮ್ಮ ಪ್ರಾಣಗಳನ್ನೇ ಈ ಪವಿತ್ರವಾದ ಕಾರ್ಯದಲ್ಲಿ ಬಲಿದಾನವಾಗಿ ಒಪ್ಪಿಸಲು ಆತುರರಾಗಿದ್ದೇವೆ" ಎಂದನು.

ಬಾದಷಹನು ಆ ಮಾತನ್ನು ಕೇಳಿ ಕ್ಷಣಕಾಲ ಮೌನ ವಾಗಿದ್ದನು. ಅನಂತರ ಸಭೆಯಲ್ಲಿ ನೆರೆದಿದ್ದ ದಳಪತಿಗಳ ಮತ್ತು ನಾಯಕರ ಮುಖ ಗಳನ್ನು ಅವಲೋಕಿಸಿದನು. ತನ್ನ ಮಗನಾದ ಮಿರ್ಜಾಮೊಗಲ್‌ನ ಮುಖ ವನ್ನು ನೋಡಿದನು. ಭಕತ್‌ಖಾನನ ಕಡೆಗೆ ದೃಷ್ಟಿಯನ್ನು ಬೀರಿದನು. ಇದಿಷ್ಟೂ ಆದ ಮೇಲೆ ಸಭೆಯನ್ನು ಉದ್ದೇಶ್ಯ ಮಾಡಿ ಹೇಳಿದನು. "ಭಾರತಾದ್ಯಂತವೂ ಮಹಾ ಸೇನಾನಿ ಎಂದು ಪ್ರಖ್ಯಾತನಾಗಿರುವ ಭಕತ್ ಖಾನನು ಬಂದಿರುವುದರಿಂದ ನಮಗೆ ಬಹಳ ಆಶೋತ್ತರಗಳುಂಟಾಗಿವೆ. ಫರಂಗಿಗಳ ಹೃದಯ ಭೇಧಕವಾದಂತಹ ಮಹಾಯುದ್ಧವನ್ನು ಇವರೊಬ್ಬ ರು ಮಾತ್ರ ನಿರ್ಮಾಣ ಮಾಡಬಲ್ಲರೆಂದುನಮಗೆ ಭರವಸೆಯಿದೆ. ಇವರನ್ನು ಈ ದೆಹಲೀ ಯುದ್ಧ ಕ್ಷೇತ್ರದ ಮಹಾಸೇನಾನಿಗಳನ್ನಾಗಿ ಮಾಡುವುದರಲ್ಲಿ ಈ ಸಭೆಯು ನನ್ನೊಂದಿಗೆ ಸಹಮತವಾಗುವ ಹಾಗಿದ್ದರೆ ನನಗೆ ಬಹಳ ಸಂತೋಷವಾಗುತ್ತದೆ."

ಮಿರ್ಜಾಮೊಗಲನು ಎದ್ದು ನಿಂತು. "ಭಕತ್‌ಖಾನರು ದೆಹಲಿಯ ಕಡೆಗೆ ಹೊರಟಿದ್ದಾರೆಂಬ ವರ್ತಮಾನವನ್ನು ಕೇಳಿದ ದಿನದಿಂದಲೂ ನಮಗೆ ಇದೇ ಆಸೆಯಿದೆ. ಅವರು ಬಂದುದು ನಮ್ಮ ಉತ್ಸಾಹವನ್ನು ನೂರ್ಮಡಿ ಯಾಗಿ ಹೆಚ್ಚಿಸಿದೆ. ಬಾದಷಹರ ಬಾಯಿಂದ ಬಂದ ಮಾತುಗಳು ನಮ್ಮ ಹೃದಯಗಳಲ್ಲಿ ಪ್ರತಿಧ್ವನಿಸುತ್ತಿವೆ. ಖಾನರು ಮಹಾಸೇನಾನಿಗಳ ಅಧಿಕಾರ ಸ್ವೀಕಾರ ಮಾಡಿ ದೆಹಲಿಯ ಯದ್ಧರಂಗವಲ್ಲಿ ವಿಜಯೋತ್ಸವ ಗಳು ಆರಂಭವಾಗಲೆಂದು ಹಾರೈಸುತ್ತೇವೆ." ಎಂದನು.

ಮುಖ್ಯ ದಳಪತಿಗಳಾದ ಸನ್ನದ್ ಖಾ಼ನ್, ಇಬ್ರಾಹಿಂಆಲೀಖಾ಼ನ್ ಮತ್ತು ಗುಲಾಂಖುಲೀಖಾನರುಗಳು ಭಾಷಣಮಾಡಿ ಅದೇ ಅಭಿಪ್ರಾಯವನ್ನು ಸೂಚಿಸಿದರು. ಇತರ ಸಭಿಕರೂ ಇದನ್ನು ಏಕಕಂಠದಿಂದ ಅನುಮೋದಿಸಿದರು.

ಅನಂತರ ಬಹದ್ದೂರ್‌ಷಹನು "ಖಾನರೇ! ನೀವು ದೆಹಲೀ ರಣಕ್ಷೇತ್ರದ ಸರ್ವಾಧಿಕಾರವನ್ನು ವಹಿಸಿಕೊಳ್ಳಬೇಕೆಂದು ನಮ್ಮ ಅಪೇಕ್ಷೆಯಾಗಿದೆ. ಇದು ಕೇವಲ ರಾಜಾಜ್ಞೆ ಎಂದುಕೊಳ್ಳಬೇಡಿ. ನಿಮ್ಮ ಕರ್ತವ್ಯವು ಇದನ್ನು ಒತ್ತಾಯ ಮಾಡುತ್ತದೆ. ದೇಶವು ನಿಮ್ಮಿಂದ ಈ ಸೇವೆಯನ್ನು ಎದುರುನೋಡುತ್ತದೆ''–ಎಂದು ತಿಳಿಸಿದನು.

ಭಕತ್‌ಖಾನನು ಅನಿರೀಕ್ಷಿತವಾಗಿ ತನಗೆ ಉಂಟಾದ ಗೌರವದಿಂದ ವಿಸ್ಮಿತನಾದನು. ವಿನಯದಿಂದ ಸ್ವತಂತ್ರ ಭಾರತ ಸಿಂಹಾಸನಕ್ಕೂ ಆ ಸಭೆಗೂ ಮಣಿದು ತನ್ನ ಒಪ್ಪಿಗೆಯನ್ನು ವ್ಯಕ್ತಪಡಿಸಿದನು.

ಗುಲಾಂ ಖುಲೀಖಾನನು ರತ್ನತಗಳ ಹಿಡಿಯಿಂದ ಅಲಂಕೃತವಾಗಿದ್ದ ಖಡ್ಗವನ್ನೂ-ವಜ್ರದಂತೆ ಅಭೇದ್ಯವಾದ ಗುರಾಣಿಯನ್ನೂ ಬಂಗಾರದ ಹರಿವಾಣದಲ್ಲಿ ತೆಗೆದುಕೊಂಡು ಹೋಗಿ ಬಾದಷಹನ ಮುಂದಿಟ್ಟನು. ಬಹದ್ದೂರ್ ಷಹನು ಅದನ್ನು ಸ್ಪರ್ಶಮಾಡಿ ಭಕತ್‌ಖಾನನಿಗೆ ಕೊಡುವಂತೆ ಹೇಳಿದನು. ಭಕತ್‌ಖಾನನು ಅದನ್ನು ಸ್ವೀಕರಿಸಿ ಅದರಿಂದ ಅಲಂಕೃತನಾದನು. ವಿವಿಧ ದಳಪತಿಗಳು ಬಂದು ಅವನಿಗೆ ಗೌರವವನ್ನು ಮಾಡಿ ಭಾರತದ ಚಕ್ರವರ್ತಿಯ ಸಾನ್ನಿಧ್ಯದಲ್ಲಿ-ಭಕತ್ ಖಾನನ ಆಜ್ಞೆಯಂತೆ ನಡೆದುಕೊಳ್ಳುವುದಾಗಿ ಪ್ರಮಾಣ ವಚನವನ್ನು ಸ್ವೀಕರಿಸಿದರು. ಇದಾದ ಮೇಲೆ ಅಂದಿನ ದರಬಾರು ಮುಕ್ತಾಯವಾಯಿತು.

ಅದೇ ದಿನ ಮಧ್ಯಾನ್ಹವೇ ಬಹದ್ದೂರ್‌ಷಹನು ಹೊಸ ದಳಪತಿಯನ್ನು ಅರಮನೆಗೆ ಹೇಳಿ ಕಳುಹಿಸಿದನು. ಏಕಾಂತದಲ್ಲಿ ಭಕತ್‌ಖಾನನಿಗೆ ಭೇಟಿಯನ್ನಿತ್ತನು. ಈ ಸಂದರ್ಭದಲ್ಲಿ ಜೀನತ್ ಬೇಗಂಳ ವಿನಾ ಇನ್ನಾರೂ ಇರಲಿಲ್ಲ.

ಈ ಭೇಟಿಯಲ್ಲಿ ಬಹದ್ದೂರ್ ಷಹನೇ ಹೆಚ್ಚಾಗಿ ಮಾತನಾಡಿದನು. ಅವನು ಹೇಳಿದನು– "ಭಕತ್ ಖಾ಼ನ್! ನನ್ನ ಮನಸ್ಸಿಗೆ ಬಹಳ ದುಃಖವಾಗುತ್ತಿದೆ. ಸುತ್ತಲೂ ಅಂಧಕಾರವು ಕವಿದಿರುವಂತೆ ಭಾಸವಾಗುತ್ತದೆ. ಭಗವಂತನು ಅನುಗ್ರಹ ಮಾಡಿ ಭಾರತಕ್ಕೆ ಸ್ವಾತಂತ್ರವನ್ನು

ಕೊಟ್ಟಿದ್ದಾನೆ ಆದರೆ. ಅದನ್ನು ಉಳಿಸಿಕೊಳ್ಳಲು ಪ್ರಯತ್ನವಮಾಡದಿದ್ದರೆ ಬಲಿದಾನಮಾಡದಿದ್ದರೆ-ಸ್ವಾತಂತ್ರ್ಯವು ಸಹರಾಮರುಭೂಮಿಯ ಮರಳೇ? ನೋಡಿರಿ! ಬದ್ಲೀ-ಕೀ-ಸಾರೈ ನಲ್ಲಿ ಯುದ್ಧವಾಯಿತು. ನಮ್ಮ ಕಡೆ ಸಹಸ್ರ ಸಹಸ್ರ ಸೈನಿಕರಿದ್ದರು. ಆದರೆ ಬರ್ನಾರ್ಡ್‌ನ ಸೇನೆಯು ನಮ್ಮ ಸೇನೆಯ ನಾಲ್ಕನೆಯ ಒಂದು ಭಾಗದಷ್ಟಿಲ್ಲ. ಆದರೇನು? ನಮ್ಮ ಸೇನಾಧಿಪತಿಯು ಯುದ್ಧರಂಗದಿಂದ ಓಡಿ ಬಂದನು. ನಮ್ಮ ದೊಡ್ಡ ಸೈನ್ಯವು ಚದುರಿ ಹೋಯಿತು. ಫರಂಗಿಗಳು ಮುಂದೆ ಬಂದರು. ಯಮುನಾ ನದಿಯ ಆಚೆ ದಡದ ವರೆವಿಗೂ ಬಂದು ಆ ದೊಡ್ಡ ಮೈದಾನದಲ್ಲಿ ಬೀಡು ಬಿಟ್ಟಿದ್ದಾರೆ. ಹಿಂದೂರಾಯನ ಮನೆಯನ್ನು ಹಿಡಿದು ಅದನ್ನು ತಮ್ಮ ಕಚೇರಿಯಾಗಿ ಮಾಡಿಕೊಂಡಿದ್ದಾರೆ.

"ನಮ್ಮಲ್ಲಿಯೂ ಬಹಳ ಸೈನ್ಯವಿದೆ. ಆದರೆ ನಮ್ಮ ಸೈನ್ಯದಲ್ಲಿ ಶಿಸ್ತು ವ್ಯವಸ್ಥೆಗಳಿಲ್ಲ. ನಮ್ಮಿಂದ ರಕ್ಷಿಸಲ್ಪಡುತ್ತಾ ದೆಹಲೀ ನಗರದಲ್ಲಿರುವ ಪ್ರಜೆಗಳನ್ನೇ ಲೂಟಿಮಾಡುತ್ತಾರೆ. ಪರಸ್ಪರ ಕಲಹ ಮಾಡುತ್ತಾರೆ. ಒಂದು ಶಿಬಿರದ ಸೈನಿಕರಂತೆ ಇವರಿಲ್ಲವೇ ಇಲ್ಲ. ನನ್ನ ಮಕ್ಕಳಲ್ಲಿ ಕೆಲವರು ಈ ವಿಪ್ಲವಕ್ಕೇ ವಿರೋಧವಾಗಿದ್ದಾರೆ. ಇದೇ ಅವಕಾಶವನ್ನು ತೆಗೆದುಕೊಂಡು ತುಂಟತನವನ್ನು ಮಾಡಲು ಹವಣಿಸುತ್ತಿದ್ದಾರೆ. ಈ ವಿಷಯಗಳೆಲ್ಲವನ್ನೂ ಯಾರೊಂದಿಗೆ ಹೇಳಿಕೊಳ್ಳಲಿ? ವಿಪ್ಲವವು ನಿರ್ದಿಷ್ಟ ದಿನಕ್ಕಿಂತಲೂ ಮೊದಲೇ ಆರಂಭವಾಗಿ ಬಿಟ್ಟಿತು. ಆದರಿಂದ ನಮ್ಮ ಕಾರ್ಯಕ್ರಮವೇ ಬದಲಾಯಿಸಿ ಹೋಗಿದೆ. ಕ್ರಾಂತಿಯ ರೂಪವೇ ಬದಲಾಯಿಸಿ ಹೋಗಿರುವುದರಿಂದ ನಾನಾರಾಯನಾಗಲೀ, ಕಾನ್ಪುರದಿಂದ ಮತ್ತಾರಾದರೂ ಆಗಲೀ ಬರುವುದು ಸಾಧ್ಯವಾಗಲಿಲ್ಲ. ಬಹಳ ದಿನಗಳಿಂದಲೂ ದೆಹಲಿಯ ಈ ರಣಕ್ಷೇತ್ರವನ್ನು ಕಟ್ಟಿ ಆಳಬಲ್ಲವನೂ, ಕ್ರಾಂತಿ ಯುದ್ಧವನ್ನು ಮುಂದೆ ಕೊಂಡು ಹೋಗಬಲ್ಲವನೂ ಆದ ಒಬ್ಬ ಮಹಾ ಸೇನಾನಿಯಿಲ್ಲವಲ್ಲಾ ಎಂದು ನನ್ನ ಮನವು ಪರಿತಪಿಸುತ್ತಿದೆ. ಭಕತ್‌ಖಾನ್! ನೀನೀಗ ಬಂದಿದ್ದೀ! ಸೈನಿಕರನ್ನು ಹದ್ದು ಬಸ್ತಿನಲ್ಲಿಟ್ಟು ಸೈನ್ಯವನ್ನು ವ್ಯವಸ್ಥೆಗೊಳಿಸು. ದೆಹಲಿಯ ಪ್ರತಿಯೊಬ್ಬ ಪ್ರಜೆಯೂ ಸಶಸ್ತ್ರನಾಗುವಂತೆ ಆಯುಧಗಳನ್ನು ಉಚಿತವಾಗಿ ಹಂಚಿಸು. ಫರಂಗೀ ವಿಧ್ವಂಸಕ

ವಾದ ಈ ಮಹಾಯುದ್ಧದಲ್ಲಿ ದೆಹಲಿಯು ವಿಲಯ ಕಾಲದ ರುದ್ರನಂತೆ ನಿಲ್ಲುವುದನ್ನೊಮ್ಮೆ ನೋಡಿದರೆ ನನಗೆ ಸಾಕು "

ಬಾದಷಹನು ಹೃದಯವನ್ನು ಬಿಚ್ಚಿ ಆಡಿದ ಮಾತುಗಳನ್ನು ಕೇಳಿ ಭಕತ್ ಖಾನನ ಹೃದಯವು ಕಂಪಿಸಿತು. ಅವನು "ಬಾದಷಹ! ದೆಹಲಿ ನಗರದ ಪ್ರಜೆಗಳಿಗೆ ಭರವಸೆಯನ್ನುಂಟು ಮಾಡುತ್ತೇನೆ. ಈ ಮಹಾ ಸೈನ್ಯವನ್ನು ಶಿಸ್ತು ವ್ಯವಸ್ಥೆಗಳಿಂದ ಕಟ್ಟಿ ಮುಂದೆ ನಡೆಸುತ್ತೇನೆ. ದೆಹಲಿಯ ರಣಾಂಗಣದಲ್ಲಿ ಫರಂಗಿಗಳು ಧೂಳೀಪಟವಾಗಿ ಹೋಗುತ್ತಾರೆ" ಎಂದನು.

ಈರೀತಿ ಬಾದಷಹನಿಗೂ-ಮಹಾ ಸೇನಾನಿಗೂ ಮಾತುಕತೆಗಳಾದವು. ಕಡೆಯಲ್ಲಿ ಬಹದ್ದೂರ್ ಷಹನು ಮೇಲೆದ್ದನು. ಎದುರಿಗಿದ್ದ ಭಕತ್ ಖಾನನನ್ನು ವಿಶ್ವಾಸದಿಂದ ಆಲಂಗಿಸಿದನು. ಅನಂತರ ಭಕತ್ ಖಾನನು ಹೋಗಲನುವಾದನು. ಬಾದಷಹನು ಅವನೊಡನೆ ಇನ್ನೇನೂ ಮಾತನಾಡಲಿಲ್ಲ. ಅವನ ಕಡೆಗೆ ನೋಡಿದನು. ಆ ದೃಷ್ಟಿಯಲ್ಲಿ ಅದೇನಿದ್ದಿತೋ ಭಕತ್ ಖಾ಼ ಬಾದಷಹನನ್ನು ಬಿಟ್ಟು ಹೊರಗೆ ಬರುವಾಗ ಮಗುವಿನಂತೆ ಅಳುತ್ತಿದ್ದನು.

## ಅರ್ಧರಾತ್ರಿಯ ಯೋಜನೆ

ದೆಹಲಿಯ ರಣರಂಗದಲ್ಲಿ ಕುಂಪಣೀ ಸೈನ್ಯಾಧಿಕಾರಿಯಾದ ಜನರಲ್ ಬರ್ನಾರ್ಡ್ ಬದ್ಲೀ-ಕೀ-ಸಾರೈ ಯುದ್ಧದಲ್ಲಿ ಜಯವನ್ನು ಪಡೆದನಂತರ "ಇನ್ನೇನು? ದೆಹಲಿಯನ್ನು ಹಿಡಿಯುವುದು ಒಂದೇ ಒಂದು ದಿನದಲ್ಲಿದೆ!" ಎಂದು ಹೇಳಿದ್ದನು. ಸಿಮ್ಲಾದ ಬೆಟ್ಟಗಳಲ್ಲಿಯೂ ಪಂಜಾಬಿನ ಕೊನೆಯಲ್ಲಿಯೂ ಇದ್ದ ಕುಂಪಣಿ ಅಧಿಕಾರಿಗಳು "ಒಂದು ದಿನದಲ್ಲಿ ಹಿಡಿಯುವ ದೆಹಲಿಗೆ ಇಷ್ಟೇಕೆ ನಿದಾನವಾಗುತ್ತಿದೆ? ಬರ್ನಾರ್ಡ್ ಏನು ಮಾಡುತ್ತಾ ಇದ್ದಾನೆ?" ಎನ್ನುತ್ತಿದ್ದರು.

ಆದರೆ ಬರ್ನಾರ್ಡ್ ಯಾವುದಕ್ಕೂ ಆತಂಕ ಪಡುವಂತಹ ಮನುಷ್ಯನಲ್ಲ. ಯಾವುದಾದರೂ ಅವನಿಗೆ ನಿದಾನವಾಗಿಯೇ ಆಗಬೇಕು.

ಒಂದು ಕೆಲಸವನ್ನು ಮಾಡುವಾಗ ಇದಾಗದಿದ್ದರೆ? ಹೀಗಾಗದಿದ್ದರೆ? ಎಂದು ಲೆಕ್ಕ ಹಾಕುತ್ತಾ ಕುಳಿತುಕೊಳ್ಳುವುದು ಅವನ ಪದ್ಧತಿ. ಅವನೆಲ್ಲಿಯಾದರೂ ಯುದ್ಧಮಾಡಬೇಕೆಂದು ಆಜ್ಞೆಮಾಡ ಬೇಕಾದರೆ ಆ ಯುದ್ಧದಲ್ಲಿ ತನ್ನ ಕಡೆಗೇ ಜಯವಾಗುವುದೆಂದು ಅವನಿಗೆ ಖಚಿತವಾಗುವವರೆಗೆ ಅವನು ಒಪ್ಪುತ್ತಲೇ ಇರಲಿಲ್ಲ. ಸೇನಾಧಿಪತಿಯ ಈ ಸ್ವಭಾವವು ಅನೇಕರಿಗೆ ಅಸಮಾಧಾನವಾಗುತ್ತಿದ್ದರೂ ವಿಧಿಯಿರಲಿಲ್ಲ. ಕುಂಪಣಿಯ ದೊಡ್ಡ ದೊಡ್ಡ ಅಧಿಕಾರಿಗಳಿಗೊ ಸಹ ಈ ಕಾರಣದಿಂದ ಆಗಾಗ ಬೇಜಾರಾಗುತ್ತಿತ್ತು. ಆದರೆ ಆತನ ಮೇಲೆ ತಪ್ಪು ಸಾಬೀತು ಮಾಡುವಂತಹ ಅವಕಾಶವು ಸಿಕ್ಕಿಯೇ ಇರಲಿಲ್ಲ.

ಎಂದಿನಂತೆಯೇ ಜನರಲ್ ಬರ್ನಾರ್ಡ್ ದೆಹಲಿಯ ಬಳಿ ಶಿಬಿರವನ್ನು ಸ್ಥಾಪಿಸಿ ಯಾವಾಗ ಮುತ್ತಿಗೆಯನ್ನು ಆರಂಭಿಸುವುದು ? ಎಂದು ಮೀನಮೇಷ ಎಣಿಸುತ್ತಾ ಇದ್ದನು. ಆಗಾಗ ಫರಂಗಿಗಳಿಗೂ ವಿಪ್ಲವಕಾರರಿಗೂ ಸಣ್ಣ ಪುಟ್ಟ ಯುದ್ಧಗಳಾಗುತ್ತಿದ್ದವು. ಆದರೆ ಆ ಯುದ್ಧಗಳೊಂದೂ ಜಯಾಪಜಯಗಳ ಮೇಲೆ ಪ್ರಭಾವವನ್ನುಂಟು ಮಾಡುವಂತಹವುಗಳಲ್ಲ.

ಫರಂಗೀ ಸೈನ್ಯವು ಹಿಂದೂ ರಾಯನ ಮನೆಯ ಬಳಿ ತಂಗಿ ನಾಲ್ಕೈದು ದಿನಗಳಾಗಿದ್ದವು. ಒಂದು ದಿನ ಸಂಧ್ಯಾ ಸಮಯದಲ್ಲಿ ಬಹದ್ದೂರ್ ಷಹನ ಮಗನಾದ ಮಿರ್ಜಾ ಮಹಮದ್ ಕುರೇಷನು ಬರ್ನಾರ್ಡ್‌ನನ್ನು ನೋಡಲು ಬಂದನು. ಬಂದವನು ಕುರೇಷನೆಂಬುದು ತಿಳಿದ ಕೂಡಲೇ ಸೈನ್ಯಾಧಿಕಾರಿಯು ಅವನನ್ನು ಒಳಗಡೆ ಕರೆಸಿದನು. ಅವನನ್ನು ಸ್ವಾಗತಿಸಿ ಯಥೋಚಿತೋಪಚಾರನ್ನು ಮಾಡಿದನು.

ಬರ್ನಾರ್ಡ್‌ನೊಂದಿಗೆ ಕುರೇಷನು ಮಾತನಾಡುತ್ತಿರುವಾಗ ಭಾರತದಲ್ಲಿ ಪ್ರಾಪ್ತವಾಗಿರುವಂತಹ ವಿಪ್ಲವದ ಮಾತು ಬಂದಿತು. ಕುರೇಷನು ವಿಪ್ಲವವು ಆರಂಭವಾದ ದಿನವೇ ವಿಪ್ಲವಕ್ಕೆ ಸೇರಬಾರದೆಂಬುದಾಗಿ ತಾನು ಬಹದ್ದೂರ್ ಷಹನನ್ನು ಎಚ್ಚರಿಸಿದುದಾಗಿ ಹೇಳಿದನು. ಫ್ರೇಸರ್ ಡೊಗ್ಲಾಸ್ ಮುಂತಾದ ಕುಂಪಣಿ ಅಧಿಕಾರಿಗಳಿಗೆ ತಾನು ರಕ್ಷಣೆಯನ್ನು ಕೊಡುವುದಾಗಿ ಹೇಳಿ ಏರ್ಪಾಟುಗಳನ್ನು ಮಾಡಿದುದಾಗಿಯೂ ಜೀನತ್ ಬೇಗಂಳಿಂದ ಅವೆಲ್ಲವೂ ಕೆಟ್ಟು ಹೋದುದಾಗಿಯೂ ಹೇಳಿದನು.

ಅದೆಲ್ಲವನ್ನೂ ಕೇಳಿ ಬರ್ನಾರ್ಡ್ ಸಂತಾಪಪಟ್ಟನು. "ಮಾನವನು ಎಷ್ಟೇ ಪ್ರಯತ್ನ ಮಾಡಿದರೂ ದೈವ ಯೋಗವಿಲ್ಲದಿದ್ದರೆ ಯಾವುದೂ ಸಫಲವಾಗುವುದಿಲ್ಲ" ಎಂದನು. ಅನಂತರ "ಭಾರತದಲ್ಲಿ ವಿಪ್ಲವವು ಬರುವುದೆಂದು ನಾವು ಎಣಿಸಿರಲಿಲ್ಲ. ಪರ್ಷಿಯಾ, ಆಫ್ಘಾನೀಸ್ಥಾನಗಳಲ್ಲಿ ಯುದ್ಧವಾಗುತ್ತಿರುವ ಈ ಕಾಲದಲ್ಲಿ ನಮಗೆ ವಿಪ್ಲವದಿಂದ ಬಹಳ ಮುಜು ಗರವಾಯಿತು" ಎಂದನು.

ಕುರೇಷ್–"ಜನರಲ್! ಮೀರತ್‌ನ ಸೈನಿಕರು ಬಂದು ದೆಹಲಿ ಯಲ್ಲಿ ಗಲಭೆಗಳಾದಾಗ ಆ ಜನಗಳು ಮಾಡಿದ ಹೇಡಿ ಕಾರ್ಯಗಳನ್ನು ನೋಡಿ ನನಗೆ ಈ ದೇಶದಲ್ಲಿ ಹುಟ್ಟಿದುದಕ್ಕಾಗಿ ನಾಚಿಕೆಯಾಯಿತು. ಹೇಗಾದರೂ ಇನ್ನೂ ಹೆಚ್ಚು ದಿನಗಳು ತುಂಟಾಟವು ನಡೆಯದಂತೆ ನೀವು ಬಂದುದು ನಮಗೆಲ್ಲಾ ಬಹಳ ಸಂತೋಷ.

ಬರ್ನಾರ್ಡ್–ನಾವು ಬಂದಿರುವುದಂತೂ ಸರಿ! ಯುದ್ಧವನ್ನೂ ಮಾಡುತ್ತೇವೆ. ಜಯಿಸುತ್ತೇವೆಂಬ ನಂಬಿಕೆಯೂ ಇದೆ. ಆದರೆ ಜಯವು ಕಷ್ಟಸಾಧ್ಯ!

ಕುರೇಷ್–ಆ ಒಂದು ವಿಷಯದಲ್ಲಿ ಮಾತ್ರ ನಾನು ನಿಮ್ಮೊಡನೆ ಸಹಮತನಲ್ಲ. ಮೊನ್ನೆ ಬದ್ಲೀ-ಕೀ-ಸಾರೈನ ಯುದ್ಧವನ್ನು ನೋಡಿದಿರಲ್ಲ. ನನ್ನ ತಮ್ಮ ಮುಗಲ್‌ನನ್ನು ಸೇನಾಧಿಪತಿಯಾಗಿ ಮಾಡಿದ್ದಾರೆ. ಮೊದಲ ನೆಯ ತೋಪು ಹಾರಿದ ಶಬ್ದವನ್ನು ಕೇಳಿ ಅವನು ಓಡಿ ಬಂದನು. ಯುದ್ಧ ರಂಗದಲ್ಲಿ ಹೋರುವುದೆಂದರೆ ಜನಾನಾದಲ್ಲಿ ಜಂಭ ಹೊಡೆದಂತೇನು? ಏನೋ ಗಲಾಟೆಮಾಡಿ ಬಿಟ್ಟರೇ ಹೊರತು ಈ ಜನ ಫರಂಗಿಯವರೊಡನೆ ನಿಂತು ಹೋರಾಡಬಲ್ಲರೆಂಬ ನಂಬಿಕೆಯು ನನಗಿಲ್ಲ.

ಬರ್ನಾರ್ಡ್–ಬಹದ್ದೂರ್ ಷಹನು ಈ ದೇಸೀ ಸೀಪಾಯಿಗಳ ಜೊತೆ ಸೇರಿದುದೇಕೆ?

ಕುರೇಷ್-ಬಹದ್ದೂರ್ ಷಹನು ಮುದುಕ. ಸಾಮಾನ್ಯವಾಗಿ ಆ ವಯಸ್ಸಿಗೆ ಬರುವಂತಹ ಅರಳು ಮರಳು ಬಂದಿದೆ. ದೆಹಲಿ ರಾಜಾಸ್ಥಾನದ ಕಾರುಬಾರೆಲ್ಲವೂ ಜೀನತ್ ಬೇಗಂಳಿಂದ ನಡೆಸಲ್ಪಡುತ್ತಾ ಇದೆ. ಬಹ ದ್ದೂರ್ ಷಹನು ಕುಂಪಣಿಯವರಿಗೆ ಸರ್ವಥಾ ವಿರೋಧವಲ್ಲವೆಂದು ನನ್ನ ಭಾವನೆ. ಆದರೆ ಮಿರ್ಜಾ ಮೊಗಲ್‌ನಿಗೆ ರಾಜ್ಯಾಧಿಕಾರವನ್ನುಂಟು

ಮಾಡಬೇಕೆಂಬ ಮನೋಗತದಿಂದ ಜೀನತ್ ಬೇಗಂ ಇವೆಲ್ಲವನ್ನೂ ಮಾಡು ತ್ತಿದ್ದಾಳೆ. ಬಹದ್ದೂರ್ ಷಹನಿಂದ ಬಲಾತ್ಕಾರವಾಗಿ ಈ ಕೆಲಸಗಳನ್ನು ಮಾಡಿಸುತ್ತಿದ್ದಾಳೆ. ಎಲ್ಲಿ ತನ್ನ ಪ್ರಾಣವನ್ನು ತೆಗೆದು ಬಿಡುವರೋ ಎಂಬ ಭಯದಿಂದ ಅವನು ಅವರು ಹೇಳಿದಂತೆ ಕೇಳುತ್ತಿದ್ದಾನೆ.

ಬರ್ನಾರ್ಡ್–ರಾಜಕುಮಾರ! ನಿಮ್ಮನ್ನು ನೋಡಿದ್ದು ಬಹಳ ಸಂತೋಷ. ನೀವು ಕುಂಪಣಿಯವರಲ್ಲಿ ರಾಜಭಕ್ತಿಯಿಂದಿರುವುದು ನಮಗೆ ಬಹಳ ಉತ್ಸಾಹವುಂಟು ಮಾಡುತ್ತದೆ. ಅದು ಉತ್ತರೋತ್ತರ ನಿಮಗೂ ಶ್ರೇಯಸ್ಕರವಾಗ ಬಹುದೆಂದು ಭರವಸೆ ಮಾಡುತ್ತೇನೆ.

ಕುರೇಷ್–ಜನರಲ್! ತಾವು ನನ್ನ ವಿಷಯದಲ್ಲಿ ಅಂತಹ ಮಾತು ಗಳನ್ನು ಹೇಳುತ್ತಿರುವುದು ನನ್ನಲ್ಲಿ ತಮಗಿರುವ ಅಪರಿಮಿತವಾದ ಅಭಿಮಾ ನವನ್ನು ವ್ಯಕ್ತಪಡಿಸುತ್ತದೆ. ಜನರಲ್! ಆದಷ್ಟು ಬೇಗ ತಾವು ದೆಹಲಿಯ ಯುದ್ಧವನ್ನು ಮುಗಿಸಿ ಬಿಡಬೇಕೆಂದು ನಮ್ಮ ಅಪೇಕ್ಷೆ. ಅದನ್ನು ತಿಳಿಸ ಬೇಕೆಂದೇ ನಾನು ಈದಿನ ತಮ್ಮ ಬಳಿಗೆ ಬಂದಿದ್ದು.

ಬರ್ನಾರ್ಡ್–ಹೌದು! ಅದೇ ನನ್ನ ಅಭಿಮತವೂ ಆಗಿದೆ. ಆದರೆ ದುಡುಕಿ ಏನಾದರೂ ಕೆಲಸಮಾಡಿದರೆ ನಾವು ದೆಹಲಿಯನ್ನು ಜಯಿಸುವಂ ತಹ ಕಾರ್ಯಕ್ಕೇ ಎಲ್ಲಿ ಕುಂದಾಗುವುದೋ ಎಂದು ಶಂಕಿಸುತ್ತಿದ್ದೇನೆ.

ಕುರೇಷ್-ದೆಹಲಿಯನ್ನು ಹಿಡಿಯುವುದು ಅಂತಹ ಕಷ್ಟ ಸಾಧ್ಯ ವಾದ ಕೆಲಸವೇನಲ್ಲ. ಆ ಸಂಬಂಧವಾದ ಯೋಜನೆಯೊಂದಿದೆ.

ಬರ್ನಾರ್ಡ್-ಮಿಸ್ಟರ್ ಕುರೇಷ್! ತಾವು ದೆಹಲಿಯವರು. ದೆಹಲೀ ಮುತ್ತಿಗೆಯ ಯೋಜನೆಯಲ್ಲಿ ನಿಮ್ಮ ಸಲಹೆಯು ಅಮೂಲ್ಯವಾದುದು. ಗ್ರೈತೆಡ್ ಮತ್ತು ಹಡ್ಸರ್‌ರು ಮುತ್ತಿಗೆಯ ಯೋಜನೆಯನ್ನು ಬರೆಯು ತ್ತಿದ್ದಾರೆ. ನೀವು ಅವರೊಡನೆ ಮಾತನಾಡಿರಿ.

ಕುರೇಷನು ಜನರಲ್ ಬರ್ನಾರ್ಡ್‌ನನ್ನು ನೋಡಿಕೊಂಡು ದಳಪತಿ ಗಳಾದ ಗ್ರೈತೆಡ್ ಮತ್ತು ಹಡ್ಸರ್‌ರನ್ನು ಕಂಡನು. ಅವರೂ ವಿಶ್ವಾಸ ದೊಡನೆ ಮಾತನಾಡಿದರು. ಕುರೇಷನು-ಕಾಬೂಲ್ ಮತ್ತು ಲಾಹೋರ್ ಗೇಟುಗಳು ಅಭದ್ರವಾಗಿದೆ. ಅರ್ಧರಾತ್ರಿಯಲ್ಲಿ ಕೆಲವರು ಹೋಗಿ ಡೈನಾ ಮೈಟುಗಳನ್ನು ಹಾಕಿ ಅದನ್ನು ಭೇದಿಸಬೇಕು. ಅಷ್ಟು ಹೊತ್ತಿಗೆ ಫರಂಗೀ ಸೈನ್ಯವು ಬಂದು ಹತ್ತಿರದಲ್ಲಿ ನಿಂತಿರಬೇಕು. ಯಾವ

ಆತಂಕವೂ ಇಲ್ಲದೇ ಆ ಬಾಗಿಲುಗಳನ್ನು ಒಡೆಯುವುದು ಸಾಧ್ಯವಾದರೆ ಕೂಡಲೇ ಫರಂಗೀ ಸೈನ್ಯವು ಒಳಗೆ ನುಗ್ಗಿ ದೆಹಲಿಯ ಮುಖ್ಯ ಮುಖ್ಯವಾದ ಸ್ಥಳಗಳನ್ನು ರಾತ್ರಿಯು ಕಳೆಯುವುದರೊಳಗಾಗಿ ಹಿಡಿದು ಬಿಡಬೇಕು. ಪ್ರಾತಃಕಾಲ ದೇಸೀ ಸೈನಿಕರೂ ಮತ್ತು ನಗರವಾಸಿಗಳು ಏಳುವುದರೊಳಗಾಗಿ ಫರಂಗೀ ಪ್ರಭುತ್ವವು ದೆಹಲಿಯಲ್ಲಿ ನೆಲೆಗೊಂಡಿರುವುದನ್ನು ನೋಡಿ ಅಚ್ಚರಿಗೊಳ್ಳುವಂತೆ ಮಾಡಬೇಕು" ಎಂದನು.

ಕುರೇಷನ ಯೋಜನೆಯು ಆ ದಳಪತಿಗಳಿಗೆ ಬಹಳ ಚೆನ್ನಾಗಿ ಒಪ್ಪಿತು. ಆ ರಾತ್ರಿಯೇ ಅವರು ಇಂಜಿನಿಯರುಗಳನ್ನು ಕರೆಸಿ ಆಸಂಬಂಧವಾದ ನಕ್ಷೆಯನ್ನೂ ಯೋಜನೆಯನ್ನೂ ಸಿದ್ಧಪಡಿಸಿದರು. ಕುರೇಷ್ನನನ್ನೂ ಕರೆದುಕೊಂಡು ಹೋಗಿ ಬರ್ನಾರ್ಡ್‌ಗೆ ಇದೆಲ್ಲ ವಿಷಯವನೂ ಹೇಳಿದನು. ಆ ಯುದ್ಧದ ಜವಾಬ್ದಾರಿಯನ್ನು ತಾವುಗಳೇ ತೆಗೆದುಕೊಳ್ಳುವದಾಗಿ ಭರವಸೆ ಕೊಟ್ಟರು. ಮಾರನೆಯ ದಿನ ರಾತ್ರಿಯೇ ಈ ಉದ್ಯಮವನ್ನು ಕೈಗೊಳ್ಳುವುದಾಗಿ ಮಾತನಾಡಿದರು.

ಬರ್ನಾರ್ಡ್ ಈ ಮಾತುಗಳಿಗೆ ಪ್ರತಿ ಹೇಳಿಲಿಲ್ಲ. ನೀವು ಪ್ರಯತ್ನ ಮಾಡಿದರೆಂದು ಹೇಳಿದನು. ಆ ಸಂಬಂಧವಾದ ಆಜ್ಞೆಯನ್ನೂ ಮಾಡಿದನು.

ಮಾರನೆಯ ದಿನ ಫರಂಗಿಗಳ ಸೈನ್ಯದಲ್ಲಿ ಕೆಲವು ದಳಪತಿಗಳಿಗೆ ಸಡಗರವೋ ಸಡಗರ. ಆ ಸಡಗರದಲ್ಲಿ ಕುರೇಷನೂ ಸೇರಿ ಹೋಗಿದ್ದಾನೆ. ಎಲ್ಲರೂ ಆರಾತ್ರಿ ದೆಹಲಿಯ ಕಾಬೂಲ್ ಮತ್ತು ಲಾಹೋರ್ ಗೇಟುಗಳನ್ನು ಒಡೆದು ನಗರ ಪ್ರವೇಶಮಾಡುವುದಕ್ಕೆ ಬೇಕಾದ ಏರ್ಪಾಡುಗಳನ್ನು ಮಾಡುತ್ತಿದ್ದಾರೆ. ಆದರೆ ಈ ವಿಷಯವು ಅತ್ಯಂತ ಗೋಪ್ಯ. ಇದಕ್ಕೆಲ್ಲಾ ಫರಂಗೀ ಸೀಪಾಯಿಗಳೇ ನಿಯಮಿತರಾಗಿದ್ದಾರೆ. ರಾತ್ರಿ ಒಂದು ಗಂಟೆಯಿಂದ ಎರಡು ಗಂಟೆಯೊಳಗಾಗಿ ಶಿಬಿರಕ್ಕೆ ಸ್ವಲ್ಪ ದೂರದಲ್ಲಿ, ಕತ್ತಲೆಯ ಜಾಗದಲ್ಲಿ, ಈ ಗುಪ್ತ ಕಾರ್ಯಾಚರಣೆಗೆ ನಿಯುಕ್ತರಾದವರೆಲ್ಲರೂ ಬರಬೇಕೆಂಬುದಾಗಿ ವಿಧಾಯಕವಾಯಿತು.

ವಿಧಾಯವಾಗಿದ್ದ ಹೊತ್ತಿಗೆ ಸ್ವಲ್ಪ ಮುಂಚಿತವಾಗಿಯೇ ಫರಂಗೀ ದಳಪತಿಗಳು ಅಲ್ಲಿಗೆ ಹೋಗಿ ಸಿದ್ಧವಾಗಿದ್ದರು. ಕುರೇಷನು ಅವರೊಂದಿಗಿದ್ದಾನೆ. ಅವರೆಲ್ಲರೂ ಕುಳಿತು ಯೋಜನೆಯ ಸಂಬಂಧವಾಗಿ ಮಾತ

ನಾಡುತ್ತಿದ್ದರು ಯಾವ ಯಾವ ಸೇನೆಗಳು ಎತ್ತೆತ್ತ ಹೋಗಬೇಕು ? ಯಾರು ಯಾರು ನಾಯಕತ್ವ ವಹಿಸಬೇಕು ? ದೆಹಲೀ ನಗರವನ್ನು ಹೊಕ್ಕ ನಂತರದ ಕಾರ್ಯಕ್ರಮವು ಹೇಗೆ ? ಅನಂತರ ಈ ಎರಡು ಸೇನೆಗಳು ಯಾವ ರೀತಿ ಸೇರುವುದು ? ಮುಂತಾಗಿ ಮಾತನಾಡುತ್ತಾ ಕುಳಿತುಕೊಂಡಿದ್ದರು. ಆ ರಾತ್ರಿ ಅವರಲ್ಲಿ ಯಾರೂ ನಿದ್ದೆಮಾಡಿರಲಿಲ್ಲ ! ಯಾಕೆ ಮಾಡಬೇಕು ? ಮಾರನೆಯ ದಿನ ರಾತ್ರಿ ದೆಹಲಿಯ ರಾಜಮಂದಿರದಲ್ಲಿ ನಿದ್ದೆಮಾಡುವಾಗ ಈ ದಿನ ರಾತ್ರಿ ಕೆಲವು ಗಂಟೆಗಳ ಕಾಲ ನಿದ್ದೆಗೆಟ್ಟರೇನಂತೆ ?

ಗಂಟೆಯು ಒಂದಾಯಿತು. ಸೈನಿಕರು ಬಂದು ಸೇರಲಾರಂಭವಾಯಿತು. ಹೊತ್ತಾಗುತ್ತಾ ಬಂದಿತು, ಸೈನಿಕರಲ್ಲಿ ಹಲವರು ಬಂದಿದ್ದಾರೆ. ಬ್ರಿಗೆಡಿಯರ್ ಗ್ರೇವ್ಸ್ ಮತ್ತು ಅವನ ಸೈನಿಕರು ಬಂದಿಲ್ಲ. ಮೂರೂ ಆಯಿತು. ಅವನು ಬರಲಿಲ್ಲ. ಉಳಿದ ದಳಪತಿಗಳು ಸೈನಿಕರಿಗೆ ವಾಪ್ಸು ಹೋಗುವಂತೆ ಹೇಳಿ ಉತ್ಸಾಹಹೀನರಾಗಿ ಹೊರಟುಹೋದರು,

ಮಾರನೆಯ ದಿನ ಬೆಳಗಾಗ ಬರ್ನಾರ್ಡನ ಕಚ್ಚೇರಿಯಲ್ಲಿ ದಳಪತಿಗಳು ಸೇರಿದರು. ಬ್ರಿಗಡಿಯರ್ ಗ್ರೇವ್ಸ್ ಸಹ ಬಂದಿದ್ದನು. ಅವನು ಬರದೇ ಇದ್ದುದಕ್ಕೆ ಇತರರು ಆಕ್ಷೇಪಿಸಿದರು. ಗ್ರೇವ್ಸ್ ಹೇಳಿದನು "ಕಮಾಂಡರರ ಆಜ್ಞೆಯಾಗಿದ್ದಾಗ ನಾನು ಬರದೇ ಇದ್ದದ್ದು ತಪ್ಪು. ನಾನು ಬರದೇ ಇದ್ದುದಕ್ಕೆ ಈ ಯೋಜನೆಯು ನನಗೆ ಇಷ್ಟವಿಲ್ಲದಿರುವುದಾಗಲೀ ಅಥವಾ ಆಜ್ಞೋಲ್ಲಂಘನೆ ಮಾಡಬೇಕೆಂಬುದಾಗಲೀ ಕಾರಣವಲ್ಲ. ನನಗೆ ಅಸಾಧ್ಯವಾದ ನಿದ್ದೆಯು ಬಂದುಬಿಟ್ಟಿತು. ಎಚ್ಚರವೇ ಆಗಲಿಲ್ಲ. ಆದಕ್ಕಾಗಿ ನಾನು ಕ್ಷಮೆಯನ್ನು ಬೇಡುತ್ತೇನೆ.

ಕುರೇಷನು ಮಧ್ಯೆ ಪ್ರವೇಶಮಾಡಿ "ಈ ದಿನ ರಾತ್ರಿಯಾದರೂ ಹೋಗೋಣವೇ ? ಎಂದು ಕೇಳಿದನು."

"ಈ ಯೋಜನೆಗೆ ನನ್ನ ಅಭ್ಯಂತರವಿದೆ. ನಾನದನ್ನು ಮಾತನಾಡಬೇಕಾಗಿದೆ" ಎಂದನು.

ಬರ್ನಾರ್ಡ್ ಗ್ರೇವ್ಸ್‌ನ ಕಡೆಗೆ ನೋಡಿದನು. ಗ್ರೇವ್ಸ್ ಹೇಳಿದನು. "ದೆಹಲೀ ನಗರದಲ್ಲಿ ಇಪ್ಪತ್ತೈದು ಸಹಸ್ರಕ್ಕಿಂತಲೂ ಹೆಚ್ಚು ಮಂದಿ ಸೈನಿಕರಿದ್ದಾರೆ. ಅವರ ಸೈನ್ಯವು ಮೊದಲಿನಂತಿಲ್ಲ. ಈಗ

ಮಿರ್ಜಾಮುಗಲ್ ವಿಪ್ಲವ ಸೈನ್ಯದ ಸೇನಾಧಿಪತಿಯಾಗಿಲ್ಲ. ರೋಹಿಲ ಖಂಡದ ಭಕತ್ ಖಾನನು ಸೈನ್ಯಾಧಿಪತ್ಯವನ್ನು ವಹಿಸಿಕೊಂಡಿದ್ದಾನೆ. ಅವರ ಸೈನ್ಯವು ಸುಸಂಘಟಿತವಾಗಿದೆ. ಪಂಜಾಬಿನಿಂದಲೂ ಕಾಶೀ ಅಲ ಹಾಬಾದ್‌ಗಳಿಂದಲೂ ನಾವು ನಿರೀಕ್ಷಿಸುತ್ತಿರುವ ಸೈನ್ಯಗಳು ಬರುವವರೆಗೆ ಪ್ರತ್ಯಕ್ಷ ಯುದ್ಧವನ್ನು ಮಾಡುವುದು ಹುಡುಗತನ. ದೆಹಲಿಯ ದ್ವಾರ ಗಳನ್ನು ಒಡೆದು ನಗರ ಪ್ರವೇಶಮಾಡಿಬಿಟ್ಟ ಮಾತ್ರಕ್ಕೆ ಯುದ್ಧದಲ್ಲಿ ಜಯುವಾಗುವುದೇ ? ನಗರವು ಕೈಗೆ ಸಿಕ್ಕಿದಂತಾಗುತ್ತದೆಯೇ ? ಅಲ್ಲಿ ರುವ ಇಪ್ಪತ್ತೈದು ಸಹಸ್ರ ಮಂದಿಯನ್ನೂ ಗೆಲ್ಲುವವರೆಗೆ ಅದು ನಮ್ಮ ದಾಗುವುದಿಲ್ಲ.

ಕುರೇಷ್–ಬಾಗಿಲುಗಳನ್ನು ಒಡೆದು ಪ್ರವೇಶಿಸಿ ಬಿಟ್ಟರೆ ಸೈನಿಕರ ಲ್ಲಿಯೂ ಜನಗಳಲ್ಲಿಯೂ ಬಹು ಸಂಖ್ಯಾತರು ನಮ್ಮ ಕಡೆ ಬಂದು ಸೇರುತ್ತಾರೆ.

ಗ್ರೀವ್ಸ್-ಹಾಗೆ ನಾವು ಜೂಜುಕೋರರಂತೆ ಯುದ್ಧವನ್ನು ಮಾಡ ಕೂಡದು. ನಮಗೆ ಜಯವು ಲಭ್ಯವಾಗುತ್ತದೆಂಬ ಭರವಸೆಯು ಬರು ವವರೆಗೆ ಯುದ್ಧವೇಕೆ ಮಾಡಬೇಕು ? ಈಗ ನಮಗೆ ಅಂತಹ ಅವಸರವೇ ನಿದೆ ? ದೆಹಲಿಯ ಯುದ್ಧದಲ್ಲಿ ನಮಗೆ ಅಪಜಯವಾದರೆ ನಾವು ದೇಶ ವನ್ನು ಬಿಟ್ಟು ಹೊರಡಬೇಕಾದ್ದೇ !

ಬ್ರಿಗೇಡಿಯರ್ ಗ್ರೀವ್ಸ್‌ನ ಮಾತು ವಿವೇಕಯುತವಾದುದೆಂದು ಎಲ್ಲರೂ ಒಪ್ಪಿಕೊಂಡರು. ಕುರೇಷನು ಸಹ ಆ ಮಾತಿಗೆ ವಿರೋಧವನ್ನು ಹೇಳಲಿಲ್ಲ. ಎಲ್ಲರಿಂದಲೂ ಬೀಳ್ಕೊಂಡು ಅವನು ಆ ಶಿಬಿರ ಪ್ರಾಂತದಿಂದ ಹೊರಟು ಹೋದನು.

ಗ್ರೀವ್ಸ್ ಹೇಳಿದ ಮಾತು ಸರಿಯಾದುದೆಂದು ಕುರೇಷನಿಗೂ ಸಹ ತೋರಿತು. ಅಂದಿನ ಸ್ಥಿತಿಯಲ್ಲಿ ದುಡುಕಿ ಫರಂಗಿಗಳು ಯುದ್ಧಮಾಡಿ ದರೆ ವಿಪ್ಲವ ಸೈನ್ಯದೆದುರಿನಲ್ಲಿ ಅವರು ನಿಮಿಷ ಕಾಲವೂ ನಿಲ್ಲಲಾರದೆಂದು ಅವನಿಗೂ ಗೊತ್ತಿತ್ತು. ಆದರೆ ಗ್ರೀವ್ಸ್ ಆಕ್ರಮಣಕ್ಕೆ ಹಿಂತೆಗೆದ್ದರಿಂದ ಅವನಿಗೆ ಅತೃಪ್ತಿಯಾಯಿತು. ಭಾರತದಲ್ಲಿ ವಿಪ್ಲವಕಾರರ ಕೈಯ್ಯೇ ಮೇಲಾಗಿದೆ ಎಂದೂ ಇನ್ನೂ ಏನು ಮಾಡಿದರೂ ಫರಂಗಿಗಳು ಜಯಿಸಲಾ ರರೆಂದೂ ಅವನು ಖಚಿತಮಾಡಿ ಕೊಂಡಿದ್ದನು. ಬ್ರಿಟಿಷರಿಂದ ತನಗೆ

ಪ್ರಸಾದಿತವಾಗಿದ್ದ ಮೊಗಲ್ ಸಿಂಹಾಸನವು ಇನ್ನು ತನಗೆ ಹಗಲು ಕನ
ಸೆಂದು ಅವನು ಅರ್ಥಮಾಡಿಕೊಂಡಿದ್ದನು. ಆದರೆ ಜೀನತ್ ಬೇಗಂಳ
ಮೇಲೆ ಅವನು ಪ್ರತೀಕಾರವನ್ನು ತೀರಿಸಿಕೊಳ್ಳ ಬೇಕಾಗಿತ್ತು. ಫರಂಗಿ
ಯವರ ದಂಡನ್ನು ತೆಗೆದುಕೊಂಡು ಹೋಗಿ ಜೀನತ್ ಬೇಗಂಳನ್ನೂ
ಅವಳ ಮಗನಾದ ಮಿರ್ಜಾ ಮೊಗಲ್‌ನನ್ನೂ ಕೊಂದು ಸೇಡು ತೀರಿಸಿ
ಕೊಳ್ಳಬೇಕೆಂದನು ಆಲೋಚಿಸಿದ್ದನು. ಬ್ರಿಗೆಡಿಯರ್ ಗ್ರೇವ್ಸ್‌ನ
ಮುಂದಾಲೋಚನೆಯಿಂದ ಅವನ ಆಶಾಲತೆಗೆ ಕೊಡಲಿಯ ಪೆಟ್ಟು
ಬಿದ್ದಂತೆ ಆಗಿದ್ದಿತು.

ದೆಹಲೀ ನಗರವನ್ನು ಪ್ರವೇಶಮಾಡಿ ತನ್ನ ಮನೆಯನ್ನು ಸೇರಿದನು.
ಹೋಗಿ ಹಾಸಿಗೆಯ ಮೇಲೆ ಮಲಗಿಕೊಂಡನು. ಎರಡು ದಿನಗಳಿಂದಲೂ
ಅವನು ನಿದ್ದೆಮಾಡಿರಲಿಲ್ಲ. ವಿಶ್ರಾಂತಿಯಿಂದ ದೇಹಕ್ಕೆ ಸುಖವಾಗುವು
ದೆಂದೂ ಮನಸ್ಸು ಹಗುರವಾಗುವುದೆಂದೂ ಬಗೆದನು. ಅವನ ಹೃದಯವು
ವಿದ್ವೇಶಾನಲದಿಂದ ಕುದಿಯುತ್ತಿತ್ತು. ಪ್ರಯತ್ನವು ವಿಫಲವಾದುದರಿಂದ
ಮನಸ್ಸು ಚಡಪಡಿಸುತ್ತಿತ್ತು. ದೇಹವು ಅದನ್ನು ತಡೆಯಲಾರದೇ ಎದ್ದು
ಕುಳಿತುಕೊಂಡಿತು. ಇನ್ನು ನಿದ್ದೆ ಎಲ್ಲಿ? ಮೇಲೆದ್ದನು. ಮನೆಯಲ್ಲಿಯೇ
ಇದ್ದ ತನ್ನ ಆಶ್ರಿತರನ್ನೂ ಮತ್ತು ಸ್ನೇಹಿತರನ್ನೂ ಕರೆದನು. "ಈದಿನರಾತ್ರಿ
ಫರಂಗಿಗಳು ದೆಹಲಿಗೆ ಮುತ್ತಿಗೆ ಮಾಡುತ್ತಾರೆ. ಅವರು ಹಠಾತ್ತನೆ
ನಗರಪ್ರವೇಶಮಾಡಿ ಬಿಡುವುದಕ್ಕೆ ಬೇಕಾದ ಏರ್ಪಾಡುಗಳೆಲ್ಲವನ್ನೂ
ಮಾಡಿಕೊಂಡಿದ್ದಾರೆ. ಅವರು ಲಾಹೋರ್‌ಗೇಟಿನಿಂದ ಬಂದು ನೇರ
ವಾಗಿ ಅರಮನೆಯ ಕಡೆಗೆ ನುಗ್ಗುತ್ತಾರೆ. ಅವರು ದೆಹಲೀ ನಗರವನ್ನು
ಪ್ರವೇಶಮಾಡಿದ ಕೂಡಲೇ ಜನಗಳು ನಮ್ಮ ಕಡೆಗಿದ್ದಾರೆಂದು ತೋರಿಸಿ
ಕೊಡಬೇಕು. ಮುಂದೆ ನನಗೆ ಅಧಿಕಾರವು ಬರುವುದು ಸಹ ಆದರ
ಮೇಲೆಯೇ ಅವಲಂಬಿತವಾಗಿದೆ. ಅವರು ಒಳಗೆ ಬರುವ ವೇಳೆಗೆ ಬಾದ
ಷಹನ ಸರ್ಕಾರಕ್ಕೆ ವಿರೋಧವಾಗಿ ಜನಗಳನ್ನು ದಂಗೆ ಎಬ್ಬಿಸುತ್ತೇವೆಂದೂ
ಅನಂತರ ಅವರೆಲ್ಲರೂ ಫರಂಗೀ ಸರ್ಕಾರದ ಕಡೆಗೆ ಸೇರುವಂತೆ ಮಾಡು
ತ್ತೇನೆಂದೂ ವಾಗ್ದಾನ ಮಾಡಿದ್ದೇನೆ. ಆದ್ದರಿಂದ ನೀವುಗಳು ಈಗ ಒಂದು
ಸಾಹಸಕಾರ್ಯವನ್ನು ಮಾಡಬೇಕು. ಭಕತ್ ಖಾನನ ಯಾಜಮಾನ್ಯ
ದಿಂದ ಅಸಮಾಧಾನಗೊಂಡವರನ್ನೂ, ಶಿಕ್ಷಿಸಲ್ಪಟ್ಟವರನ್ನೂ ಕೆಲಸದಿಂದ

ತೆಗೆದು ಹಾಕಲ್ಪಟ್ಟವರನ್ನೂ ಕೂಡಿಸಿ ಈದಿನ ಅರ್ಧರಾತ್ರಿಯಲ್ಲಿ ಗಲಾಟೆ ಎಬ್ಬಿಸಬೇಕು. ಲಾಹೋರ್ ಗೇಟಿನಿಂದ ಬಂದರೆ ಚೌರಂಗೀ ಚೌಕದ ಮಾರ್ಗವಾಗಿ ಅರಮನೆಗೆ ಹೋಗುವ ದಾರಿಯಲ್ಲಿರುವ ಜೀನತ್ ಬೇಗಮಳ ಮನೆಯಲ್ಲಿ ಅವಳು, ಮುಗಲ್ ಭಕತ್‌ಖಾ ಎಲ್ಲರೂ ಸೇರಿ ಮಾತನಾಡುತ್ತಿರುತ್ತಾರೆ. ಅವರು ಅಲ್ಲಿರುವಾಗಲೇ ಆ ಮನೆಗೆ ಬೆಂಕಿ ಹಚ್ಚಿಬಿಡಬೇಕು. ಅಷ್ಟು ಹೊತ್ತಿಗೆ ಫರಂಗಿಗಳೂ ಬಂದುಬಿಡುತ್ತಾರೆ. ಅವರು ಬಂದಮೇಲೆ ತನಗೆ ತಾನೇ ಗಲಭೆಗಳಾಗುತ್ತವೆ. ನಾವೇ ಅದನ್ನು ಮಾಡಿಸಿದವರೆಂದು ಅದರ ಕೀರ್ತಿ ಎಲ್ಲವೂ ನಮಗೇ ಬಂದು ಬಿಡುತ್ತದೆ. ಇದಕ್ಕೆ ಎಷ್ಟು ಹಣವು ಖರ್ಚಾದರೂ ಪರವಾಯಿಲ್ಲ. ಈ ರಾತ್ರಿ ಅವರು ಮೂರು ಮಂದಿಯೂ ಆ ಮನೆಯಲ್ಲಿ ಸಜೀವವಾಗಿ ಉರಿದು ಹೋಗಬೇಕು" ಎಂದು ಹೇಳಿದನು.

ಆದಿನ ರಾತ್ರಿ ಸುಮಾರು ಎರಡು ಗಂಟೆಗಳಿರಬಹುದು. ಚೌರಂಗೀ ಚೌಕ್ ಬೀದಿಯಲ್ಲಿದ್ದ ಜೀನತ್ ಬೇಗಮಳ ಮನೆಯ ಬಳಿ ಅವರಿವರು ಸುಳಿದಾಡುತ್ತಿದ್ದರು. ಪಹರೆಯವರು ಬಂದು ನೀವಾರೆಂದು ಕೇಳಿದರು. "ಯಾರೇ ಆದರೂ ನೀವಿಲ್ಲಿ ಓಡಿಯಾಡಕೂಡದು. ಸೇನಾಧಿಪತಿಗಳು ಮಂತ್ರಾಲೋಚನೆಯಲ್ಲಿದ್ದಾರೆ" ಎಂದು ಹೇಳಿದನು.

ಇನ್ನೂ ಸ್ವಲ್ಪ ಹೊತ್ತು ಕಳೆಯಿತು. ಕುರೇಷನು ಬಂದು "ಡೈನಾಮೈಟ್ ಇಟ್ಟು ಲಾಹೋರ್ ಗೇಟ್ ಒಡೆಯುತ್ತಿದ್ದಾರೆ. ನೀವು ಈಮನೆಗೆ ಬೆಂಕಿ ಹಚ್ಚಿಬಿಡಿರಿ" ಎಂದು ಹೇಳಿದನು.

ಸುಮಾರು ಅರ್ಧಗಂಟೆಯ ಹೊತ್ತಿನಲ್ಲಿ ಜಿನತ್ ಬೇಗಂಳ ಮನೆಯು ಬೆಂಕಿಯು ಕಂಡುಬರುವಂತೆ ಹತ್ತಿಕೊಂಡಿತು. ಮನೆಯು ಹತ್ತಿಕೊಳ್ಳುತ್ತಲೇ ಅನೇಕ ಮಂದಿ ಜನಗಳೂ, ಸೈನಿಕರೂ ಬಂದರು. ಒಳಗಿದ್ದವರು ರಗಡೆಗೆ ಬಂದರು. ಬೆಂಕಿಯಾರಿಸಲು ಪ್ರಯತ್ನ ಮಾಡಿದರು. ಈ ಗಲಭೆಯಲ್ಲಿ ಕುರೇಷನು ಕತ್ತಿಯನ್ನು ತೆಗೆದುಕೊಂಡು ಮಿರ್ಜಾಮೊಗಲ್‌ನ ಕಡೆಗೆ ನುಗ್ಗಿದನು. ಅಷ್ಟರಲ್ಲಿ ವಿಪ್ಲವಕಾರನೊಬ್ಬನು ಕುರೇಷನ ಕಡೆಗೆ ಗುಂಡುಹಾರಿಸಿದನು. ಆ ಗುಂಡು ತಗುಲಿ ಕುರೇಷನು ಕೆಳಗೆ ಬಿದ್ದನು.

## ದೆಹಲಿಯ ಪತನ

ಸ್ವತಂತ್ರವಾದ ದೆಹಲಿಯನ್ನು ಜಯಿಸಲು ಬಂದಂತಹ ಫರಂಗೀ ಸೇನೆಯ ಗತಿಯು ಅಸ್ಥಾವಸ್ಥೆಯಾಗಿದ್ದಿತು. ದೆಹಲಿಯನ್ನು ಮುತ್ತಲು ಬಂದಿದ್ದ ಈ ಸೈನಿಕರನ್ನು ವಿಪ್ಲವಕಾರರೇ ಮುತ್ತುತ್ತಿದ್ದರು. ಎಷ್ಟೋ ಬಾರಿ ಯುದ್ಧಗಳನ್ನು ಮಾಡಿ ಫರಂಗೀ ಸೈನ್ಯವನ್ನು ಪರಾಜಿತಗೊಳಿಸಿದರು. ಅವರ ಕಡೆಯ ವೀರರೂ ಕೀರ್ತಿಶಾಲಿಗಳೂ ಆದ ದಳಪತಿಗಳು ಒಬ್ಬೊಬ್ಬರಾಗಿ ಮರಣಹೊಂದುತ್ತಾ ಬಂದರು. ಇಬ್ಬರು ಸೇನಾಧಿಪತಿಗಳು ಮರಣ ಹೊಂದಿದರು. ಮತ್ತೊಬ್ಬ ಸೇನಾಧಿಪತಿಯು ಕೆಲಸಕ್ಕೆ ರಾಜೀನಾಮೆಯನ್ನು ಕೊಟ್ಟು ಪರ್ವತ ಪ್ರಾಂತಕ್ಕೆ ಹೊರಟು ಹೋದನು. ಫರಂಗಿಯವರು ತಾವೇ ಯುದ್ಧವನ್ನು ಮಾಡುವುದು ಹಾಗಿರಲಿ. ವಿಪ್ಲವಕಾರರು ಮೇಲೆ ಬಿದ್ದರೆ ಸ್ವರಕ್ಷಣಾ ಯುದ್ಧವನ್ನು ಮಾಡುವುದು ಸಹ ಅವರಿಗೆ ಸಾಧ್ಯವಿರಲಿಲ್ಲ. ಒಂದು ಯುದ್ಧದಲ್ಲಿ ಎಲ್ಲೋ ಕೆಲವರು ಮರಣ ಹೊಂದಿದರೂ ಸಹ ಅದು ಅವರಿಗೆ ಬಹಳ ತೊಂದರೆಯುಂಟುಮಾಡುತ್ತಿತ್ತು. ಅವರ ಸೇನೆಯಲ್ಲಿ ಅಷ್ಟು ಸ್ವಲ್ಪಮಂದಿ ಸೈನಿಕರಿದ್ದರು.

ಫರಂಗಿಗಳು ದೆಹಲಿಯ ಪರಿಸರಕ್ಕೆ ಬಂದು ಬೀಡುಬಿಟ್ಟು ಒಂದೂವರೆ ತಿಂಗಳಾಗಿದ್ದಿತು. ಅವರು ಎಷ್ಟೋ ನಷ್ಟ ಪಟ್ಟಿದ್ದರು. ಆದರೇನು ? ಇನ್ನೂ ದೆಹಲಿಯ ಕೋಟೆಯು ಅಭೇದ್ಯ ವಾಗಿದ್ದಿತು. ಆ ಕೋಟೆಯ ಸ್ವತಂತ್ರ ಧ್ವಜವು ನಸುನಗುತ್ತಿರುವಂತೆ ಹಾರುತ್ತಿದ್ದಿತು.

ಮೇಜರ್ ರೀಡ್ ಪರ್ವತ ಪ್ರಾಂತಕ್ಕೆ ಹೊರಟುಹೋಗುತ್ತಲೇ ವಿಲ್ಸನ್ ಅಧಿಕಾರವನ್ನು ಸ್ವೀಕರಿಸಿದದು. ಇವನು ಅಧಿಕಾರ ವಹಿಸಿಕೊಂಡಾಗಲೂ ಫರಂಗೀ ಸೇನೆಗಳಸ್ಥಿತಿಯು ಏಕ ಪ್ರಕಾರವಾಗಿದ್ದಿತು. ಆಗಾಗ ಬಂದು ಹಠಾತ್ತನೆ ಮೇಲೆ ಬಿದ್ದು ವಿಪ್ಲವಕಾರರು ಮಾಡುವ ಯುದ್ಧದಿಂದಫರಂಗೀ ಸೈನಿಕರಿಗೆ ಹುಚ್ಚು ಹಿಡಿದಂತಾಗಿದ್ದಿತು. ದೆಹಲಿಯ ಯುದ್ಧವು ಅವರಿಗೆ ಬಹಳ ಮುಖ್ಯವಾದ ಯುದ್ಧವಾಗಿತ್ತು. ಆ ಪ್ರಾಂತದ ವಿಪ್ಲವಕಾರರೆಲ್ಲರೂ ಅಲ್ಲಿ ಬಂದು ಸೇರಿಬಿಟ್ಟಿದ್ದರು. ದೆಹಲಿಯ ಯುದ್ಧವನ್ನು ಗೆದ್ದು ಬಿಟ್ಟರೆ ಅರ್ಧ ವಿಪ್ಲವವನ್ನೇ ಗೆದ್ದಂತಾಗುತ್ತಿತ್ತು.

ದೆಹಲೀ ಕೋಟೆಯು ಬಿದ್ದನಂತರ ಅಲ್ಲಿದ್ದ ಸಹಸ್ರಾರು ವಿಪ್ಲವಕಾರರು ದೇಶಾದ್ಯಂತವೂ ಹರಡಿ ಕೊಳ್ಳುತ್ತಿದ್ದರೆಂಬುದು ನಿಜ. ಆದರೆ ಒಮ್ಮೆ ಸೋತು ಓಡಿಹೋದ ವಿಪ್ಲವಕಾರರಿಗಾಗಿ ಅಷ್ಟು ಹೆದರ ಬೇಕಾಗಿರಲಿಲ್ಲ.

ಇದೆಲ್ಲವೂ ವಿಲ್ಸನ್‌ಗೆ ಗೊತ್ತಿತ್ತು. ಆದರೆ ಅವನ ಸೈನಿಕರೆಲ್ಲರಿಗೂ ಅತೃಪ್ತಿಯಾಗಿತ್ತು. ಜಯಿಸುತ್ತೇವೆಂಬ ಉತ್ಸಾಹವಿರಲಿಲ್ಲ. ಮೇಲಿಂದ ಮೇಲೆ ವಿಪ್ಲವಕಾರರು ಬಂದು ಬೀಳುತ್ತಿದ್ದುದರಿಂದ ಅವರು ಬೇಸತ್ತು ಹೋಗಿದ್ದರು. ಅದರಿಂದ ದೆಹಲಿಯ ಯುದ್ಧವನ್ನು ಜಯಿಸುವ ಆಲೋಚನೆಯನ್ನೇ ಬಿಟ್ಟು ಸೈನ್ಯಗಳನ್ನು ವಾಪ್ಸು ತೆಗೆದುಕೊಂಡು ಹೋಗಬೇಕೆಂದು ವಿಲ್ಸನ್ ನಿರ್ಧರಿಸಿದನು. ಅವನೊಡನಿದ್ದ ಇತರ ದಳಪತಿಗಳೂ ಸಹ ಅದೇ ಅಭಿಪ್ರಾಯದಿಂದ ಕೂಡಿದ್ದರು.

ಒಂದು ದಿನ ಬೈರ್ಡ್‌ಸ್ಮಿತ್ ಎಂಬ ದಳಪತಿಯು ಮಾತನಾಡುತ್ತಿರುವಾಗ ವಿಲ್ಸನ್ ಹೇಳಿದನು. "ದೆಹಲಿಯಲ್ಲಿ ಜಯವು ನಮಗೆ ಇನ್ನು ಸ್ವಪ್ನವೆಂದು ಕಂಡು ಬರುತ್ತದೆ. ಒಂದು ದಿನಕ್ಕಿಂತಲೂ ಮತ್ತೊಂದು ದಿನವು ನಮಗೆ ಕಷ್ಟಕರವಾಗಿದೆ. ಆದ್ದರಿಂದ ನಾನು ಸೈನ್ಯವನ್ನು ತೆಗೆದುಕೊಂಡು ವಾಪ್ಸು ಹೊರಟು ಹೋಗ ಬೇಕೆಂದಿದ್ದೇನೆ" ಎಂದನು.

ಬೈರ್ಡ್ ಉತ್ತರ ಕೊಟ್ಟನು. "ನಾವು ದೆಹಲಿಯಿಂದ ಒಂದು ಇಂಚಿನಷ್ಟು ಸಹ ಹಿಂದೆ ಹೋಗಕೂಡದು. ನಾವು ಈಗ ದೆಹಲಿಯ ಸುತ್ತಲೂ ಬಿಗಿದಿರುವ ಹಿಡಿಯನ್ನು ಇನ್ನೂ ಬಿಗಿಮಾಡಬೇಕು." ಒಂದು ವೇಳೆ ನಾವು ದೆಹಲಿಯನ್ನು ಬಿಟ್ಟೆವೋ ಪಂಜಾಬು ನಮ್ಮ ಕೈಯಿಂದ ಹಕ್ಕಿಯಂತೆ ಹಾರಿ ಹೋಗುತ್ತದೆ. ಭಾರತವು ಕಳಚಿ ಕೊಳ್ಳುತ್ತದೆ. ನಮ್ಮ ಸಾಮ್ರಾಜ್ಯವು ಎಂದೆಂದಿಗೂ ನಮಗಿಲ್ಲದಂತಾಗುತ್ತದೆ.

ಈ ಮಾತು ವಿಲ್ಸನನಿಗೂ ನಿಜವೆಂದೆನಿಸಿತು. ಒಂದು ವೇಳೆ ಇಲ್ಲೇ ಹೋರುತ್ತಿದ್ದರೆ, ಏನಾದೀತು ? ನಾನು ಸಾಯುತ್ತೇನೆ. ಈ ಸೈನ್ಯವು ನಾಶವಾಗುತ್ತದೆ. ಆದರೆ ಆಗಲಿ. ನಮ್ಮ ಸಾಮ್ರಾಜ್ಯರಕ್ಷಣಾ ಪ್ರಯತ್ನದಲ್ಲಿ ಇದು ಆಗಿಹೋಗಲಿ ಎಂದು ಬಗೆದನು.

ಅನಂತರ ವಿಲ್ಸನ್ ತನ್ನ ಇತರ ದಳಪತಿಗಳನ್ನು ಕರೆಸಿ ಅವರನ್ನು ಹುರಿದುಂಬಿಸಿದನು. ಸೈನಿಕರ ಕವಾಯಿತ್‌ಗಳನ್ನು ಏರ್ಪಡಿಸಿ ತಾನಲ್ಲಿಗೆ ಹೋಗಿ ಅವರಿಗೆ ಎಲ್ಲರಿಗೂ ಧೈರ್ಯವನ್ನು ಹೇಳಿದರು. ಕರ್ನಲ್

ನಿಕೋಲ್‌ಸನ್ ಪಂಜಾಬಿನಿಂದ ಸಹಸ್ರಾರು ಸೈನ್ಯಗಳನ್ನು ತೆಗೆದುಕೊಂಡು ಬರುತ್ತಿದ್ದಾನೆಂಬ ಸುಳ್ಳುಮಾತನ್ನು ಹೇಳಿ ಅವರನ್ನು ಉಬ್ಬಿಸಿದನು. ಇದರಿಂದ ಸೈನ್ಯದಲ್ಲಿ ಒಂದು ಬಗೆಯ ಹೊಸ ಉತ್ಸಾಹವು ಬಂದಂತೆ ಆಯಿತು.

ಈ ಸಮಯದಲ್ಲಿ ಒಂದು ಅಘಟಿತ ಘಟನಾವಳಿಯೂ ನಡೆಯಿತು. ಫರಂಗೀ ಸೇನೆಗಳ ಮೇಲೆ ಯುದ್ಧಮಾಡಲು ಭಕತ್‌ಖಾನನು ನೀಮುಚ್ ಮತ್ತು ರೈಲಿಗಳ ಸೈನ್ಯಗಳನ್ನು ಕಳುಹಿಸಿದ್ದನು. ಈ ಎರಡು ಸೇನೆಗಳಿಗೂ ಒಳಗೊಳಗೇ ಸ್ವಲ್ಪ ಮನಸ್ತಾಪವಿದ್ದಿತು. ಆದರೂ ಸೈನ್ಯಗಳು ನಜಾಫ್‌ಗರ್‌ನವರೆಗೆ ಹೋದವು. ಅಲ್ಲಿ ಹೋದನಂತರ ಇದು ಬಿಗಡಾಯಿಸಿತು. ಒಬ್ಬರು ಬೀಡು ಬಿಡುವ ಕಡೆ ಮತ್ತೊಬ್ಬರು ಬೀಡು ಬಿಡುವುದಿಲ್ಲವೆಂದು ಜಗಳವಾಡಿದರು. ನೀಮುಚ್ ಸೈನ್ಯವು ಭಕತ್ ಖಾನನ ಆಜ್ಞೆಯಂತೆ ಬರೈಲಿ ಸೈನ್ಯವಿಳಿದ ಕಡೆಯೇ ಇಳಿದುದೇ ಅದಕ್ಕೆ ವಿರೋಧವಾಗಿ ಪಕ್ಕದ ಹಳ್ಳಿಯಲ್ಲಿ ಹೋಗಿ ತಂಗಿತು. ಈ ವಿಷಯವನ್ನು ತಿಳಿಯುತ್ತಲೇ ವಿಲ್ಸನ್ ತನ್ನ ಸೈನ್ಯವನ್ನು ನೀಮುಚ್ ಸೈನ್ಯದ ಮೇಲೆ ಯುದ್ಧ ಮಾಡಲು ಕಳುಹಿಸಿದನು. ಹಠಾತ್ತನೆ ಫರಂಗೀ ಸೈನ್ಯವು ಬಂದು ಬಿಟ್ಟಿತು. ನೀಮಾಚ್‌ನ ಸೈನಿಕರು ಒಟ್ಟಿಗಿರಲಿಲ್ಲ. ಅವರು ಯುದ್ಧಕ್ಕೆ ಸಿದ್ಧರಾಗಿರಲಿಲ್ಲ. ಮಿಂಚಿನಂತೆ ಬಂದ ಯುದ್ಧವನ್ನು ನೋಡಿ ಇದ್ದುದರಲ್ಲಿ ಸರಿಮಾಡಿಕೊಂಡು ಕಾದಿದರು. ವೀರರಂತೆ ಕಾದಿದರು. ಆದರೇನು? ಆ ಯುದ್ಧದಲ್ಲವರು ಸೋತರು. ಬದ್ಲೀ–ಕೀ–ಸಾರೈನ ಯುದ್ಧಾನಂತರ ವಿಪ್ಲವಕಾರರು ಅಂತಹ ಸೋಲನ್ನು ಪಡೆದೇ ಇರಲಿಲ್ಲ.

ಈ ಜಯವು ಫರಂಗೀ ಸೈನ್ಯ ಶಿಬಿರದಲ್ಲಿ ಮಹತ್ತರವಾದ ಬದಲಾವಣೆಯನ್ನುಂಟುಮಾಡಿತು. ಸೈನಿಕರು ಉತ್ಸಾಹಗೊಂಡರು. ಇನ್ನು ತಮ್ಮ ಕೈಮೇಲಾಗುತ್ತದೆಂಬ ಧೈರ್ಯವು ಅವರಿಗುಂಟಾಯಿತು. ದೆಹಲಿಯನ್ನು ಮುತ್ತಲು ಅವರು ಹಾತೊರೆಯಲಾರಂಭಿಸಿದರು. ದಳಪತಿಗಳು ದೆಹಲಿಯನ್ನು ಪ್ರತ್ಯೇಕ್ಷವಾಗಿ ಮುತ್ತುವ ಯೋಜನೆಗಳನ್ನು ಕುರಿತು ಆಲೋಚಿಸತೊಡಗಿದರು. ಇದೆಲ್ಲದರ ಮೇಲೆ ಪಂಜಾಬಿನ ಕಡೆಯಿಂದ ಫರಂಗೀ ಸೈನ್ಯಕ್ಕೆ ಮಹಾ ಸೈನ್ಯವೊಂದು ಬಂದು ಸೇರಿತು. ಇದರಲ್ಲಿ ಐನೂರು ಫರಂಗೀ ಸೈನಿಕರೂ ಐದುಸಾವಿರ ಮಂದಿ ಸಿಕ್ ಮತ್ತು

ಪಂಜಾಬೀ ಸೈನಿಕರೂ ಎರಡುವರೆ ಸಾವಿರ ಕಾಶ್ಮೀರಿಗಳೂ ಇದ್ದರು. ಇವರೊಡನೆ ಬಂದ ಇತರರನ್ನೂ ಸೇರಿಸಿಕೊಂಡರೆ ಈ ಸೈನ್ಯವು ಹನ್ನೊಂದು ಸಹಸ್ರದಷ್ಟು ಶಕ್ತವಾಗಿದ್ದಿತು. ಹೀಗೆ ಶಕ್ತವಾದ ಫರಂಗೀ ಸೇನೆಯು ದೆಹಲಿಯನ್ನು ಮುತ್ತಲು ನಿದಾನ ಮಾಡಲಿಲ್ಲ. ಈ ಸೇನೆಯು ನಾಲ್ಕು ಭಾಗಗಳಾದವು. ಮೂರು ಭಾಗಗಳು ನಿಕೋಲ್‌ಸನ ಅಧಿಪತ್ಯದಲ್ಲಿ ದೆಹಲೀ ನಗರದ ಎಡಭಾಗದಲ್ಲಿ ನಿಂತವು. ಉಳಿದೊಂದು ಭಾಗವು ಮೇಜರ್ ರೀಡ್‌ನ ಅಧೀನದಲ್ಲಿ ನಗರ ಪ್ರವೇಶ ಮಾಡಲು ಕಾಬೂಲ್ ಗೇಟ್ ಬಳಿನಿಂತಿತು.

ಫರಂಗೀ ಸೇನೆಯು ದೆಹಲಿಯ ಬಳಿ ಬಂದಿಳಿದ ಮೂರೂವರೆ ತಿಂಗಳ ನಂತರ ಒಂದು ದಿನ ಪ್ರಾತಃಕಾಲ ವಾಗುತ್ತಲೇ ಯುದ್ಧಾರಂಭವಾಯಿತು. ದೆಹಲಿಯ ಕೋಟೆಯನ್ನು ನೋಡಿ ಬಗ್ಗಿ ಹೋಗುತ್ತಿದ್ದ ತೋಪುಗಳು ಆ ದಿನ ತಲೆ ಎತ್ತಿ ನಿಂತು ಭೋರ್ಗರೆಯಲು ಮೊದಲು ಮಾಡಿದವು. ನಿಕೋಲ್‌ಸನ ಅಧೀನದಲ್ಲಿದ್ದ ಸೇನೆಗಳು ಕೋಟೆಯ ಗೋಡೆಯ ಕಡೆಗೆ ಧಾವಿಸಿದವು. ವಿಪ್ಲವಕಾರರ ತೋಪುಗಳೂ ಸಹ ಕೋಟೆಯೊಳಗಿನಿಂದ ಬೆಂಕಿಯನ್ನು ಚೆಲ್ಲಿದವು. ಫರಂಗಿಗಳು ನುಗ್ಗಿ ಮುಂದೆ ಮುಂದೆ ಬಂದರು. ಅನೇಕರು ತೋಪಿನ ಬೆಂಕಿಯಲ್ಲಿ ಉರಿದು ಹೋದರು. ಕೆಳಗೆ ಬಿದ್ದರು. ಕಂದಕದಲ್ಲಿದ್ದ ಯಮುನಾ ನದಿಯ ನೀರಿನಲ್ಲಿ ಕೊಚ್ಚಿ ಹೋದರು. ಆದರೂ ಅವರು ಮುಂದೆ ನುಗ್ಗಿದರು. ಏಣಿಗಳನ್ನು ಹಾಕಿ ಹತ್ತಲಾರಂಭಿಸಿದರು. ವಿಪ್ಲವಕಾರರು ವೀರಾವೇಶದಿಂದ ಕಾದಿದರು. ಹತ್ತುವ ಫರಂಗೀ ಸೈನ್ಯದ ಮೇಲೆ ಗುಂಡುಗಳನ್ನು ಹೊಡೆದರು. ಕಲ್ಲು ಬಂಡೆಗಳನ್ನು ಉರುಳಿಸಿದರು. ಬೆಂಕಿಯನ್ನು ಸುರಿದರು. ಇರುವೆಯ ಸಾಲುಗಳಂತೆ ಹತ್ತುತ್ತಿದ್ದ ಫರಂಗಿಗಳು ಎಸೆವ ಕಲ್ಲುಗಳಂತೆ ಕೆಳಗೆ ಬೀಳುತ್ತಿದ್ದರು. ಆದರೂ ಅವರು ಹಿಂಜರಿಯದೇ ಕೋಟೆಯನ್ನು ಹಿಡಿಯಲು ಪ್ರಯತ್ನ ಮಾಡುತ್ತಿದ್ದರು. ಕಡೆಗೆ ಅತ್ಯಂತ ಸಾಹಸದಿಂದ ಒಂದು ಕಡೆ ಕೋಟೆಯ ಗೋಡೆಯನ್ನು ಭೇದಿಸಿ ಕಂಡಿಯನ್ನು ನಿರ್ಮಿಸಿದರು. ದಳಪತಿಯ ವಿಜಯದ ತುತ್ತೂರಿಯನ್ನು ಕೇಳಿ ಸೈನಿಕರು ಮುಂದೆ ನುಗ್ಗಿದರು.

ಕಾಶ್ಮೀರ್ ಗೇಟ್‌ಗೆ ಡೈನಾಮೈಟ್ ಇಟ್ಟು ಭೇಧಿಸಲು ಹೋಮ್ಸ್ ಮತ್ತು ಸಾಕಲ್ಡ್ ಸೈನ್ಯಗಳನ್ನು ತೆಗೆದುಕೊಂಡು ಹೋದರು. ಮಳೆಯ ಹನಿಗಳು ಬೀಳುವಂತೆ ವಿಪ್ಲವಕಾರರು ಅವರ ಮೇಲೆ ಗುಂಡುಗಳನ್ನು ಹಾರಿಸಿದರು. ಗೇಟಿನ ಮುಂದೆ ಕಂದಕವನ್ನು ದಾಟಿ ಬರಲು ದಪ್ಪವಾದ ಹಲಗೆಗಳನ್ನು ಸೇತುವೆಯಂತೆ ಹಾಕಿದರು. ವಿಪ್ಲವಕಾರರು ಆ ಹಲಗೆಗಳೆಲ್ಲವನ್ನೂ ಮುರಿದು ಹಾಕಿದರು. ಒಂದೇ ಒಂದು ಹಲಗೆಯುಳಿಯಿತು. ಫರಂಗೀ ಸೈನಿಕರು ಅದರ ಮೇಲೆ ನಡದು ಬಂದನು. ಅನೇಕರು ಎದುರುಗಡೆಯಿಂದ ಹಾರುತ್ತಿದ್ದ ಗುಂಡಿನ ಏಟಿಗೆ ಸಿಕ್ಕಿ ಕಂದಕದಲ್ಲಿ ಬಿದ್ದರು. ಆದರೆ ಹೋಮ್ಸ್ ಮುಂದೆ ಒಂದು ಗೇಟಿನ ಬಳಿ ಆಸ್ಫೋಟಕವನ್ನಿಟ್ಟು ವಾಪ್ಸು ಬಂದನು. ಇತರರು ಅದಕ್ಕೆ ಬೆಂಕಿ ಹಚ್ಚಲು ನುಗ್ಗಿದರು. ಲೆಫ್ಟಿನೆಂಟ್ ಸಾಕಲ್ಡ್ ಮುಂದೆ ಹೋದನು. ಅವನಿಗೆ ಗುಂಡುತಗಲಿ ಬಿದ್ದನು. ಕ್ಯಾಪ್ಟನ್ ಬರ್ಗೆಸ್ ಹೋದನು. ಅವನಿಗೂ ಗುಂಡು ತಗುಲಿತು. ಆದರೆ ಆ ವೀರನು ಅಂತಹ ಸ್ಥಿತಿಯಲ್ಲಿಯೂ ಆ ಸಮಯದಲ್ಲಿಯೂ ಆಸ್ಫೋಟಕಕ್ಕೆ ಬೆಂಕಿಯಿಟ್ಟನು.

ನಿಮಿಷಾರ್ಧದಲ್ಲಿ ಭಯಂಕರವಾದ ಶಬ್ದವಾಯಿತು. ಕಾಶ್ಮೀರ್ ಗೇಟ್ ಒಡೆದು ಹೋಯಿತು. ಫರಂಗೀ ಸೈನ್ಯದವರು ಜಯ ಸೂಚಕವಾದ ತೂತ್ತೂರಿಯನ್ನೂದಿದರು. ಇದನ್ನು ನೋಡಿ ಜಯಕಾರವನ್ನು ಮಾಡುತ್ತಾ ವಿಪ್ಲವಕಾರರೂ ನುಗ್ಗಿ ಬಂದರು ಆ ಜಯಧ್ವನಿಯಲ್ಲಿ ಕಾಶ್ಮೀರ್ ಗೇಟು ಒಡೆಯುವುದಕ್ಕಾಗಿಯೇ ಕಾದಿದ್ದ ಕ್ಯಾಂಪ್‌ಬೆಲ್‌ಗೆ ಆಸ್ಫೋಟನೆಯ ಶಬ್ದವಾಗಲೀ, ತುತ್ತೂರೀ ಧ್ವನಿಯಾಗಲೀ ಕೇಳಿಬರಲಿಲ್ಲ ಆದರೂ ಅವನು ದಂಡು ತೆಗೆದುಕೊಂಡು ಮುಂದೆ ಬಂದನು. ಫರಂಗೀ ಸೈನಿಕರು ಭಗ್ನವಾದ ಕಾಶ್ಮೀರ್ ಗೇಟನ್ನು ನೋಡಿದರು. ತಮ್ಮ ಜೊತೆಗಾರರು ಬಿದ್ದಿದ್ದ ಕಂದಕವನ್ನು ದಾಟಿ ದೆಹಲಿಯ ಕಡೆಗೆ ನುಗ್ಗಿದರು.

ಕಾಶ್ಮೀರ್ ಗೇಟಿನ ಕಡೆಗೆ ಮೇಜರ್ ರೀಡ್‌ನ ಆಧಿಪತ್ಯದಲ್ಲಿ ಹೋದ ಸೇನೆಗಳನ್ನು ಸಬ್ಜಿಮಂಡಿಯ ಬಳಿ ವಿಪ್ಲವಕಾರರು ಎದುರಿಸಿದರು. ಫರಂಗೀ ಬಲವು ಮುಂದುವರಿಯಲಾಗಲಿಲ್ಲ. ಅಷ್ಟರಲ್ಲಿ ಹೋಪ್‌ಗ್ರಾಂಟ್ ಕುದುರೆ ಸೈನ್ಯವನ್ನು ತಂದನು. ಅದು ಬಂದನಂತರ ಯುದ್ಧವು ಕಳೆಯೇರಿತು. ವಿಪ್ಲವಕಾರರು ಮಹಾಶೌರ್ಯದಿಂದ ಲೋಕವೇ ಕಂಡು

ಕೇಳದಂತಹ ರೀತಿಯಲ್ಲಿ ಯುದ್ಧ ಮಾಡಿದರು. ಗುಂಡಿನ ಸುರಿಮಳೆಯನ್ನು ಕರೆದು ರಣಾಂಗಣದಲ್ಲಿದ್ದ ಹಳ್ಳಕೊಳ್ಳಗಳಲ್ಲಿ ರಕ್ತವನ್ನು ತುಂಬಿದರು. ಫರಂಗಿಗಳು ತಿರೋಗಮನ ಮಾಡಬೇಕೆಂದು ಯೋಚಿಸಿದರು. ಹಾಗೆ ಮಾಡಿದರೆ ತೋಪುಗಳು ಕೈಬಿಟ್ಟು ಹೋಗುತವೆ ದಳಪತಿಯಾದ ಹೋಪ್ ಗ್ರಾಂಟ್ ಕುದರೆ ಸೈನಿಕರನ್ನು ಕುರಿತು ಪರಿಸ್ಥಿತಿಯನ್ನು ವಿವರಿಸಿದನು. ಆ ಕುದುರೆವಳಗಳವರು " ನೀವು ಯೋಚಿಸಬೇಡಿರಿ. ನಿಮಗೆಷ್ಟು ಹೊತ್ತು ಬೇಕೋ ಅಷ್ಟು ಹೊತ್ತು ನಿಂತಿರುತ್ತೇವೆ. " ಎಂದು ಹೇಳಿದರು. ಹಾಗೆಯೇ ನಿಂತರು ಸತ್ತು ಕೆಳಗುರುಳುವವರೆಗೆ ಪ್ರತಿಯೊಬ್ಬ ಸೈನಿಕನೂ ನಿಂತಿದ್ದನು. ಹಾಗೆ ನಿಂತ ಧೀರರೂ ಭಾರತೀಯರೇ! ಭಾರತೀಯರ ದೌರ್ಭಾಗ್ಯವು ಅವರನ್ನು ಫರಂಗಿಗಳ ಸೈನ್ಯಕ್ಕೆ ಸೇರಿಸಿತ್ತು.

ಆದರೆ ವಿಪ್ಲವಕಾರರು ಹಿಂಜರಿಯಲಿಲ್ಲ. ಪುನಃ ಪುರೋಗಮನ ಮಾಡಿದರು. ಹೆಚ್ಚು ಹೊತ್ತು ಫರಂಗೀ ಸೈನ್ಯವು ನಿಲ್ಲಲಾಗಲಿಲ್ಲ. ಬಹಳ ಪ್ರಯಾಸದಿಂದ ನಷ್ಟದಿಂದ ಹಿಡಿದಿದ್ದ ಪ್ರದೇಶವನ್ನು ಬಿಟ್ಟೋಡಿದರು.

ಕ್ಯಾಂಪ್ ಬೆಲ್‌ಜೊನ್ಸ್, ನಿಕೋಲ್ಸ್ ಇವರುಗಳು ತಮ್ಮ ಸೈನ್ಯಗಳನ್ನು ತೆಗೆದುಕೊಂಡು ದೆಹಲೀ ನಗರದೊಳಗೆ ಮೂರು ಕಡೆಗಳಿಂದಲೂ ನುಗ್ಗಿಬಂದರು. ಮೇಜರ್ ರೀಡ್‌ನ ಸೈನ್ಯವು ಬರಲಿಲ್ಲ. ಅದಕ್ಕಾಗಿ ಸ್ವಲ್ಪ ಹೊತ್ತು ಕಾದರು. ಆದರೂ ಅದು ಬರುವ ಸುಳಿವು ಕಾಣುಬರಲಿಲ್ಲ ಮೂರು ಸೈನ್ಯಗಳೂ ಸೇರಿ ಮುಂದೆ ಬಂದವು.

ಫರಂಗೀ ಸೈನ್ಯವು ಕೋಟೆಯನ್ನು ಪ್ರವೇಶಿಸಿದುದಾಗಿ ಭಕತ್‌ಖಾನನಿಗೆ ವರ್ತಮಾನವು ಬಂದಿತು. ಅವನು ದೆಹಲೀ ನಗರದಲ್ಲಿದ್ದ ಸೈನ್ಯವೆಲ್ಲವನ್ನೂ ಕೂಡಿಸಿ ಕೊಂಡು ಇಂಗ್ಲೀಷರನ್ನು ತಡೆದನು. ಜನಗಳೂ ಸೀಪಾಯಿಗಳೂ ಫರಂಗಿಗಳ ಮೇಲೆ ಯುದ್ಧ ಮಾಡಿದರು. ಕಿಟಕಿ, ಬಾಗಿಲು ವರಾಂಡ, ಹೆಂಚು ಎಲ್ಲ ಕಡೆಗಳಿಂದಲೂ ಗುಂಡುಗಳು ಹಾರಲಾರಂಭವಾದವು. ದೆಹಲೀ ನಗರವು ವಿಲಯ ಕಾಲದ ರುದ್ರನಂತೆ ಎದ್ದು ರಿಸುತ್ತಾ ನಿಂತಿರುವಾಗ ಯಾರು ಮುಂದೆ ಬರಬಲ್ಲರು? ಭಕತ್‌ಖಾನ್ ಸ್ವಯಂ ಯುದ್ಧ ಮಾಡಲು ಬಂದು ನಿಂತಿರುವಾಗ ಯಾರು ಎದುರಿಸಬಲ್ಲರು? ಆದರೆ ವಿಜಯೋನ್ಮತ್ತನಾದ ನಿಕೋಲ್‌ಸನ್ ಮುಂದೆ ಬಂದನು. ಸೈನಿಕರನ್ನು ಹುರಿದುಂಬಿಸಿ ಅವರೊಂದಿಗೆ ಮುಂದೆ ನುಗ್ಗಿದನು.

ಆದರೆ ಭಕತ್‌ಖಾನನೇ ನಿಂತು ಯುದ್ಧಮಾಡುತ್ತಿರುವಾಗ ಸಾಧ್ಯವಾಗಲಿಲ್ಲ. · ಅವನು ಹಿಮ್ಮೆಟ್ಟಬೇಕಾಯಿತು! ಇನ್ನಾರು? ಜಾಕೋಬ್ ಮುಂದೆ ನುಗ್ಗಿದನು. ಆದರೆ ಐದು ನಿಮಿಷಗಳೊಳಗಾಗಿ ಅವನು ಆ ಸಮರಾಂಗಣದಲ್ಲಿ ಕೆಳಗೆ ಬಿದ್ದನು. ನಿಕೋಲ್ಸನ್ನಿಗೆ ಈ ಅಪಜಯವನ್ನು ತಡೆಯಲಾಗಲಿಲ್ಲ. ಅವನು ಸಾಹಸಮಾಡಿ ಪುನಃ ಮುಂದೆ ಬಂದನು. ಸ್ವಲ್ಪ ಹೊತ್ತು ಯುದ್ಧವು ನಡೆಯಿತು. ಭಕತ್ ಖಾನನು ತನ್ನ ದೊಡ್ಡ ಕುದುರೆಯನ್ನು ಹಾರಿಸಿ,ಸಿಡಿಲಿನಂತೆ ಮುಂದೆ ಬಂದು ನಿಕೋಲ್ಸನಿಗೆ ಗುಂಡು ಹೊಡೆದನು. ಅವನೂ ಸಹ ಕೆಳಗೆ ಬಿದ್ದನು. ನಿಕೋಲ್ ಸನ್ ಕೆಳಗೆ ಬಿದ್ದನಂತರ ಫರಂಗಿಗಳ ಸೈನ್ಯವು ಹಿಮ್ಮೆಟ್ಟಿತು.

ಅಷ್ಟಕ್ಕೆ ಅಂದಿನ ಯುದ್ಧವು ಮುಗಿಯಿತು. ದೆಹಲಿಯ ಯುದ್ಧದಿಂದ ಏನಾಯಿತು ? ಮುಖ್ಯ ಸೇನಾಧಿಪತಿಗಳಿಗೆ ಗಾಯಗಳಾದವು. ನೂರಾರುಮಂದಿ ದಳಪತಿಗಳು ಮರಣ ಹೊಂದಿದ್ದರು. ಸಹಸ್ರಾರು ಸೈನಿಕರು ದೆಹಲಿಯ ಆ ರಣಾಂಗಣದಲ್ಲಿ ಬಿದ್ದಿದ್ದರು. ಉಳಿದವರು ಕಾಶ್ಮೀರ್ ಗೇಟ್‌ನ ಬಳಿ ಇದ್ದ ದೆಹಲಿಯ ಮದ್ಯಸಂಗ್ರಹವನ್ನು ಲೂಟಿಮಾಡಿ ಮಲಗಿದ್ದರು. ಇಷ್ಟಾಗಿ ಕಾಲು ಭಾಗದಷ್ಟು ದೆಹಲಿಯೂ ಫರಂಗಿಗಳ ಕೈವಶವಾಗಿರಲಿಲ್ಲ.

ಆದಿನ ರಾತ್ರಿ ದೆಹಲಿಯ ಒಂದು ಮೂಲೆಯಲ್ಲಿ ಬೀಡು ಬಿಟ್ಟಿದ್ದ ಇಂಗ್ಲಿಷ್ ಸೈನ್ಯದ ಕಮಾಂಡರುಗಳು ಸಭೆ ಮಾಡಿದರು. ಪೆಟ್ಟು ತಿಂದಿದವರು ಹಾಸಿಗೆಯ ಮೇಲೆ ಮಲಗಿಕೊಂಡೇ ಅದರಲ್ಲಿ ಭಾಗವಹಿಸಿದರು ದೆಹಲಿಯ ಯುದ್ಧ ಕ್ಷೇತ್ರದಲ್ಲಿ ಫರಂಗಿಗಳ ಅಧಿಪತಿಯಾದ ವಿಲ್‌ಸನ್ ಸಭಾ ಪ್ರಾರಂಭದಲ್ಲಿ–" ದೆಹಲೀ ನಗರವು ಇನ್ನೂ ಜಯಿಸಲ್ಪಟ್ಟಿಲ್ಲ. ವಿಪ್ಲವಕಾರರು ಕಳೆದುಳಿದ ನಮ್ಮನ್ನು ಯುದ್ಧಕ್ಕೆ ಆಹ್ವಾನಿಸುತ್ತಿದ್ದಾರೆ. ಇರುವವರನ್ನೂ ಇಲ್ಲಿ ಬಲಿ ಕೊಡುವುದೇ ? ವಾಪ್ಸು ಹೊರಟುಹೋಗುವುದೇ ? ವಾಪ್ಸು ಹೋಗೋಣ ! " ಎಂದನು.

ಮಲಗಿದ್ದ ನಿಕೋಲ್ಸನ್ ಆ ಮಾತು ಕೇಳಿ ಸರ್ಪದಂಷ್ಟ್ರನಾದವನಂತೆ ಮೇಲೆದ್ದು " ವಾಪ್ಸು ! ವಾಪ್ಸು ಹೋಗುವುದು. ವಾಪ್ಸು ಹೋಗುವ ಈ ವಿಲ್ಸನ್‌ನನ್ನು ಗುಂಡಿನಿಂದ ಹೊಡೆದು ಕೊಲ್ಲಲು ನನ್ನ ಕೈಗಳಲ್ಲಿ ತ್ರಾಣವಿಲ್ಲವಲ್ಲಾ ! " ಎಂದು ಕಿರಚಿಕೊಂಡನು. ಅವನ ಎದೆಯಲ್ಲಿದ್ದ ಗಾಯ

ದಿಂದ ರಕ್ತವು ಉಕ್ಕಿ ಬಂತು. ಅವನು ನಿತ್ರಾಣನಾಗಿ ಹಾಸಿಗೆಯ ಮೇಲೆ ಬಿದ್ದನು.

ಕಮಾಂಡರ್ ವಿಲ್ಸರ್ ಮಾತನಾಡಲಿಲ್ಲ. ಅವನು ಎದ್ದು ಹೊರಗೆ ಹೋದನು. ಇತರ ದಳಪತಿಗಳು ಆ ಸಭಾಗೃಹದಿಂದ ಹೊರಗೆ ಹೋದರು.

ಅದೇ ದಿನ ರಾತ್ರಿ ವಿಪ್ಲವ ಸೈನದ ನಾಯಕರೂ ಸಮಾವೇಶವಾದರು. ಅವರಲ್ಲಿ ಭಿನ್ನಾಭಿಪ್ರಾಯವುಂಟಾಯಿತು. ಭಕತ್ ಖಾನನು ಕಡೆಯವರೆವಿಗೆ ಹೋರಾಡಬೇಕೆಂದು ಅಭಿಪ್ರಾಯಪಟ್ಟನು. ಮತ್ತೆ ಕೆಲವರು ದೆಹಲಿಯನ್ನು ತ್ಯಾಗಮಾಡಿ ಆ ಪ್ರಾಂತದಲ್ಲಿ ಪುನಃ ಯುದ್ಧ ನಿರ್ಮಾಣಮಾಡಬೇಕೆಂದರು. ಭಕತ್ ಖಾ ದೆಹಲಿ ಬಿಟ್ಟರೆ ಯುದ್ಧವೇ ಹೋದಂತೆ ಎಂದನು. ದೆಹಲಿಯ ತ್ಯಾಗಕ್ಕೆ ಅವನೊಪ್ಪಲಿಲ್ಲ. ಆದರೆ ಅವನ ಅಭಿಪ್ರಾಯವನ್ನು ವಿರೋಧಿಸಿದವರು ತಮ್ಮ ಸೇನೆಗಳೊಡನೆ ಆದಿನ ರಾತ್ರಿಯೇ ದೆಹಲೀ ನಗರವನ್ನು ತ್ಯಾಗ ಮಾಡಿದರು.

ಅನಿರೀಕ್ಷಿತವಾಗಿ ಬಂದೊದಗಿದ ಈ ಸಂದರ್ಭವನ್ನು ಫರಂಗಿಗಳು ವ್ಯರ್ಥವಾಗಿ ಹೋಗಗೊಡಲಿಲ್ಲ. ಅವರು ದೆಹಲಿಯಂಡ ತಿರೋಗಮನ ಮಾಡದೇ ಆಕ್ರಮಣವನ್ನು ಮುಂದುವರಿಸಿದರು. ಭಕತ್ ಖಾನನ ಸೈನಿಕರೂ ಹಿಂದೆಗೆಯಲಿಲ್ಲ. ಒಂದು ಪ್ರದೇಶದಲ್ಲಿ ಒಬ್ಬನೇ ಇದ್ದರೂ ಸರಿ! ಇಂಗ್ಲಿಷ್ ದಂಡು ಬರುವವರೆಗೆ ಕಾದಿದ್ದು ತನಗೆ ಸಾಧ್ಯವಾದಷ್ಟು ಗುಂಡುಗಳನ್ನು ಅವರ ಮೇಲೆ ಹಾರಿಸಿ ತನ್ನ ಅಸುವನ್ನು ನೀಗುತ್ತಿದ್ದನು. ಆದರೆ ಈ ಪ್ರತಿರೋಧವು ಬಹಳ ಕಾಲ ನಿಲ್ಲಲಿಲ್ಲ. ಎರಡು ಮೂರು ದಿನಗಳಲ್ಲಿ ಮುಕ್ಕಾಲು ಭಾಗದಷ್ಟು ದೆಹಲಿಯು ವಿಪ್ಲವಕಾರರ ಕೈಬಿಟ್ಟಿತು.

ಈ ಸಮಯದಲ್ಲಿ ಒಂದು ದಿನ ಭಕತ್ ಖಾನನು ಹೋಗಿ ಬಹದ್ದೂರ್ ಷಹನನ್ನು ಕಂಡನು. ಅವನು ಪಲ್ಲಂಕದ ಮೇಲೆ ಮಲಗಿ ಆಲೋಚನಾಮಗ್ನನಾಗಿದ್ದನು. ಜೀನತ್ ಬೇಗಂಳು ಪಕ್ಕದಲ್ಲಿ ಕುಳಿತು ಗಾಳಿ ಹಾಕುತ್ತಿದ್ದಳು. ಭಕತ್ ಖಾನನು ಬಂದುದರಿಂದ ಏನು ವ್ಯತ್ಯಾಸವೂ ಆಗಲಿಲ್ಲ. ಬಾದಷಹನು ಹಾಗೆಯೇ ಮಲಗಿದ್ದನು. ಬೇಗಮಳು ಹಾಗೆಯೇ ಕುಳಿತಿದ್ದಳು. ಭಕತ್ ಖಾ ಬಂದು ಬಾದಷಹನ ಎದುರಿಗೆ ನಿಂತುಕೊಂಡನು. "ಬಾದಷಹ! ದೆಹಲಿಯು ನಮ್ಮ ಕೈಬಿಟ್ಟು

ಹೋಯಿತು ನಾವು ಈಗ ದೆಹಲಿಯನ್ನು ತ್ಯಾಗಮಾಡಿ ಹೊರಗೆ ಹೋಗಿ ಕಡೆಯ ವರೆವಿಗೆ ಯುದ್ಧಮಾಡೋಣ! ಬಂದು ಬಿಡಿರಿ. ಕೂಡಲೇ ಹೊರಗೆ ಹೋಗಿಬಿಡೋಣ" ಎಂದನು.

ಬಾದಷಹನು "ಇಲ್ಲ"ವೆನ್ನುವಂತೆ ತಲೆಯಾಡಿಸಿದನು.

ಭಕತ್‌ಖಾನನು ಜೀನತ್ ಬೇಗಂವಳಕಡೆಗೆ ನೋಡಿದನು. ಅವಳು "ಬಾದಷಹ! ಭಕತ್‌ಖಾ ಹೇಳುವುದು ಸರಿಯಾಗಿದೆ" ಎಂದಳು.

ಬಹದ್ದೂರ್‌ಷಹನು – "ಇಲ್ಲ. ನಾನು ಬರುವುದಿಲ್ಲ. ನಾನೂ ಇಲ್ಲಿಯೇ ಇರುತ್ತೇನೆ" ಎಂದನು.

"ಇಲ್ಲಿದ್ದು ಏನಾಗುತ್ತದೆ?" ಭಕತ್ ಖಾನನು ಕೇಳಿದದು.

"ಏನಾಗುವುದೋ ನೋಡುತ್ತೇನೆ!"

"ಪರಂಗಿಗಳು ನಿಮ್ಮನ್ನು ದಸ್ತಗಿರಿ ಮಾಡುತ್ತಾರೆ"

"ಮಾಡಲಿ. ಆದರೂ ಇಲ್ಲಿಯೇ ಇರುತ್ತೇನೆ"

ಭಕತ್‌ಖಾನನಿಗೆ ಕೋಪವು ಬಂದಿತು. ಅವನು ಹೇಳಿದನು "ನೀವು ಹೊರಗೆ ಬನ್ನಿರಿ! ಯುದ್ಧಮಾಡುತ್ತಾ ಸತ್ತರೆ ಭಾರತದ ಚಕ್ರವರ್ತಿಗಳಾಗಿ ಸಾಯುತ್ತೀರಿ. ಇಲ್ಲಿಯೇ ಇದ್ದರೆ ಫರಂಗಿಗಳ ಬಂದಿಗಳಾಗಿ ಕಾರಾಗೃಹದಲ್ಲಿ ಸಾಯುತ್ತೀರಿ!"

ಬಹದ್ದೂರ್‌ಷಹನು ಪುನಃ ತಲೆಯಾಡಿಸಿ "ಬರುವುದಿಲ್ಲ" ಎಂದನು.

ಜಿನತ್‌ಬೇಗಮಳ ಕಣ್ಣುಗಳಿಂದ ನೀರು ಸುರಿಯುತ್ತಿತ್ತು.

ಭಕತ್ ಖಾನನು ಅಲ್ಲಿಂದ ಹೊರಗೆ ಹೋದನು. ಅದೇ ದಿನ ಸೈನ್ಯ ಸಮೇತನಾಗಿ ದೆಹಲಿಯನ್ನು ತ್ಯಾಗಮಾಡಿದನು.

## ಝಾನ್ಸಿ ಲಕ್ಷ್ಮೀ ಬಾಯಿ

ದೆಹಲೀ ನಗರವು ಪತನವಾಯಿತೆಂದೂ, ಕಳೆದುಳಿದ ವಿಪ್ಲವ ಕಾರರನ್ನು ಕರೆದುಕೊಂಡು ಭಕತ್‌ಖಾನನು ನಗರ ತ್ಯಾಗಮಾಡಿದನೆಂದೂ, ಅವನನ್ನು ರಾಜಕುಮಾರನಾದ ಫಿರೋಜನು ಅನುಸರಿಸಿದನೆಂದೂ ತಿಳಿದಾಗ ನಾನಾಸಾಹೇಬನೂ ಅವನ ಸಹೋದ್ಯೋಗಿಗಳೂ

ಔಂಧ್‌ನಲ್ಲಿದ್ದರು. ಕಾನ್ಪುರವು ಪತನವಾಗಿ ಅವರುಗಳು ಔಂಧ್‌ಗೆ ಬಂದು ಮತ್ತೊಂದು ಯುದ್ಧರಂಗವನ್ನು ನಿರ್ಮಾಣ ಮಾಡುತ್ತಿದ್ದರು. ಈ ಯುದ್ಧರಂಗದಲ್ಲಿ ಹ್ಯಾವ್‌ಲಾಕ್' ಮತ್ತು ನೈಲ್‌ನ ಸೇನೆಗಳನ್ನು ಸೋಲಿಸಿ ಅರ್ಧ ಫರಂಗೀ ಬಲವನ್ನು ನಾಶಮಾಡ ಬೇಕೆಂದಿದ್ದರು. ಅದ ಪ್ಟರಲ್ಲಿ ಹಠಾತ್ತನೆ ದೆಹಲಿಯ ಯುದ್ಧವು ನಿಂತುಹೋಗಿ ನಗರವು ಫರಂಗಿ ಗಳ ವಶವಾದುದು ಅವರಿಗೆಷ್ಟು ಮನೋವ್ಯಥೆಯನ್ನುಂಟು ಮಾಡಿತೆಂಬು ದನ್ನು ವಿವರಿಸಬೇಕಾದ ಆವಶ್ಯಕವಿಲ್ಲ. ಇನ್ನು ಆ ಸೇನೆಗಳೂ ಈ ದಳಪ ತಿಗಳಿಗೆ ಸಹಾಯಕವಾಗಿ ಬರುತ್ತವೆ. ಫರಂಗಿಗಳ ಬಲವು ಅಪರಿಮಿತ ವಾಗುತ್ತದೆ. ಹಾಗಿರುವಾಗ ಮುಂದೆ ವಿಪ್ಲವವನ್ನು ನಡೆಯಿಸುವುದೆಷ್ಟು ಕಷ್ಟ ?

ಇಂಥಾ ಸಂದರ್ಭವಲ್ಲಿ ನಾನಾರಾಯನ ಬಾಲ್ಯ ಸ್ನೇಹಿತಳಾದ ಝೂನ್ಸೀ ಲಕ್ಷ್ಮೀಬಾಯಿಯು ಅವನಿಗೊಂದು ಕಾಗದವನ್ನು ಬರೆದಳು. ಅದು ನಾನಾರಾಯನಿಗೆ ತಲುಪಿತು. ಆ ಕಾಗದದಲ್ಲಿ ಈ ರೀತಿಯಾ ಗಿದ್ದಿತು.

ನಾನಾ !

“ ನೀನು ಈಗ ಅಖಂಡ ಹಿಂದೂಸ್ಥಾನದ ಕ್ರಾಂತಿಯ ಮಹಾನಾಯ ಕನಾಗಿದ್ದೀಯೆ ? ಹಿಮಾಲಯದಿಂದ ವಿಧ್ಯಪರ್ವತಗಳವರೆಗೂ ವಿಶಾಲ ವಾದ ಯುದ್ಧಕ್ಷೇತ್ರವನ್ನೂ ನಿರ್ಮಾಣಮಾಡಿದ್ದೀಯೆ ! ಅಂತಹ ಮಹಾ ಪುರುಷನನ್ನು ನಾನು “ ನಾನಾ ” ಎಂದು ಕರೆಯಬಹುದೇ ? ಆದರೆ ನಿನ್ನ ಪ್ರಿಯ ಸಹೋದರಿಗೆ ಅಂತಹ ಸ್ವಾತಂತ್ರವಿದೆ ಎಂದು ಭಾವನೆ ಮಾಡು ತ್ತೇನೆ. ನಾನಾ ! ನಾನು ನಿನ್ನನ್ನು ಬೇರೆಯ ರೀತಿಯಲ್ಲಿ ಕರೆಯಲೀಲಾರೆ.

ನಾವು ಬಿತ್ತೂರಿನ ಅರಮನೆಯಲ್ಲಿ ಒಟ್ಟಿಗೆ ಆಡುತ್ತಿದ್ದೆವು. ಆ ದಿನ ಗಳು ನಿನಗೂ ಜ್ಞಾಪಕವಿದೆ. ಈಗ ಅದನ್ನು ಜ್ಞಾಪಕಮಾಡಿಕೊಳ್ಳುವು ದರಿಂದ ಪ್ರಯೋಜನವಿಲ್ಲ. ಹಾಗೆಯೇ ಒಂದು ದಿನ ನಾನು ಝೂನ್ಸಿಗೆ ಬಂದು ಬಿಟ್ಟೆ. ಅದು ನಿನಗೆ ಜ್ಞಾಪಕವಿರಬಹುದು. ಅಂದಿನಿಂದ ನಾವು ಭೇಟಿಮಾಡುವಂತಹ ಪ್ರಸಂಗವು ಬರಲೇ ಇಲ್ಲ.

ನಿನ್ನ ತಂಗಿಯು ಏನಾಗಿದ್ದಾಳೆಂದು ನೀನು ಎಂದಾದರೂ ಜ್ಞಾಪಕ ಮಾಡಿಕೊಂಡಿದ್ದೀಯಾ ? ಅದಕ್ಕಾಗಿ ನಾನು ಆಕ್ಷೇಪಣೆ ಮಾಡುವುದಿಲ್ಲ.

ಬಾಲ್ಯದಿಂದಲೂ ಸ್ವತಂತ್ರ ಭಾರತ ನಿರ್ಮಾಣದಲ್ಲಿ ದೀಕ್ಷಾಪರನಾದ ನೀನು, ಅದಕ್ಕೆ ಹಗಲೂ ರಾತ್ರಿಯೂ ತಿರುಗುತ್ತಿದ್ದ ನೀನು, ನನ್ನನ್ನು ಜ್ಞಾಪಿಸಿಕೊಳ್ಳಲಿಲ್ಲವೆಂದೂ, ಬಂದು ನೋಡಲಿಲ್ಲವೆಂದೂ ನಾನು ಆಕ್ಷೇಪಣೆ ಮಾಡುವುದಿಲ್ಲ.

ಫರಂಗಿಗಳು ಝಾನ್ಸಿಯನ್ನು ಬಿಟ್ಟು ಬಿಡಬೇಕೆಂದರು. ನನ್ನ ಪ್ರೀತಿಯ ಝಾನ್ಸಿಯನ್ನು ಬಿಡಬೇಕೆಂದರು. ನಾನು ಅದಕ್ಕೆ ಒಪ್ಪಲಿಲ್ಲ. ಝಾನ್ಸಿಯು ಸ್ವತಂತ್ರವೆಂದೂ ಇದರ ಮೇಲೆ ಯಾರ ಅಧಿಕಾರವೂ ಇಲ್ಲವೆಂದೂ ಹೇಳಿದೆ. ಝಾನ್ಸಿಯ ಸುತ್ತಮುತ್ತಲಲ್ಲಿಯೇ ಇರುವ ಸಾಗರ, ನೌಗಾ, ಬಂಡಾ ಬಾಣಾಪುರ ಷಾಹ್‌ಗರ್ ಕಿರ್ಕಿ ಮುಂತಾದ ಕೋಟೆಗಳೂ ಸ್ವತಂತ್ರವೆಂದು ಘೋಷಿಸಿ, ಝಾನ್ಸಿಯ ಅಧಿಪತ್ಯವನ್ನು ಒಪ್ಪಿಕೊಂಡಿವೆ. ಈಗ ಇಂಗ್ಲಿಷರ ದಂಡು ಬಂದು ಝಾನ್ಸಿಯ ಮೇಲೆ ಯುದ್ಧವನ್ನು ಹೂಡಿದೆ. ಸಾಧ್ಯವಾದಷ್ಟು ಸೇನೆಗಳನ್ನು ಕಳುಹಿಸಿ ಸಹಾಯಮಾಡುತ್ತೀ ಎಂದು ನಂಬುತ್ತೇನೆ ”

ಈ ಕಾಗದವನ್ನು ಓದಿ ನಾನಾರಾಯನಿಗೆ ಏಕಕಾಲದಲ್ಲಿ ಆನಂದವೂ ದುಃಖವೂ ಉಂಟಾಯಿತು. ಕಾರ್ಪುರದಿಂದ ಬಂದ ವಿಪ್ಲವಕಾರರ ದಂಡು ಅವನಿಗೆ ಬೇಕಾಗಿರಲಿಲ್ಲ. ಔಂಧ್‌ನ ಯುದ್ಧಕ್ಕೆ ಅಲ್ಲಿಯೇ ಬೇಕಾದಷ್ಟು ಮಂದಿ ವೀರರಿದ್ದರು. ಸವ ಗ್ರದೇಶವೇ ಸಿದ್ಧವಾಗಿದ್ದಿತು. ಆದ್ದರಿಂದ ಕಾರ್ಪುರದಿಂದ ತನ್ನೊಡನೆ ಬಂದಿದ್ದ ದಂಡನ್ನು ಕೊಟ್ಟು ರಾವ್‌ಸಾಹೇಬ್ ಪೇಶ್ವೆಯನ್ನು ಝಾನ್ಸಿಯ ಕಡೆಗೆ ಕಳುಹಿಸಿದನು. ಕಾರ್ಪುರದ ಯುದ್ಧದಲ್ಲಿ ಶೌರ್ಯದಿಂದ ಕಾದಿದ ತಾಂತ್ಯಾಟೋಪಿಯೂ ಆ ಸೇನೆಗೆ ಅಧಿಪತಿಯಾಗಿದ್ದನು ಇವರುಗಳು ಕಾಲ್ಪಿಗೆ ಸಮೀಪದಲ್ಲಿ ಯಮುನಾನದಿಯನ್ನು ದಾಟಿ ದಕ್ಷಿಣದ ಕಡೆಗೆ ಹೊರಟರು. ಚರ್‌ಕಾರೀ ರಾಜನು ಇವರನ್ನು ಎದುರಿಸಿದನು. ಆ ಯುದ್ಧದಲ್ಲಿ ವಿಪ್ಲವಕಾರರು ಜಯಶೀಲರಾದರು. ಯುದ್ಧದಿಂದ ಇವರಿಗೆ ಇಪ್ಪತ್ತೆರಡು ಫರಂಗಿಗಳೂ ಮೂರು ಲಕ್ಷ ರೂಪಾಯಿ ನಿಧಿಯೂ ಮತ್ತು ಸೈನಿಕರೂ ಸಿಕ್ಕಿದರು. ಈ ಸೈನ್ಯವು ಬಂದು ಝಾನ್ಸಿಯ ಬಳಿ ಬೀಡುಬಿಟ್ಟಿತು. ಆ ಸೈನ್ಯದಲ್ಲಿ ಇಪ್ಪತ್ತೆರಡು ಸಹಸ್ರ ಮಂದಿ ಸೈನಿಕರಿದ್ದರು.

ಹೀಗೆ ನಾನಾರಾಯನ ಅಗಾಧವಾದ ಸೈನ್ಯವು ಬರುತ್ತಲೇ ಝಾನ್ಸಿಯಲ್ಲಿ ಧೈರ್ಯೋತ್ಸಾಹಗಳುಂಟಾದವು. ಫರಂಗೀ ದಳಪತಿಯಾದ ಹ್ಯೂರೋಜನೂ ಸಹ ಹೆದರಿದನು. ಬೆದರಿ ಕಂಗಾಲಾಗಿದ್ದ ಅವನು ಎರಡು ಕಡೆಯೂ ಯುದ್ಧಾರಂಭಮಾಡಿದನು. ಒಂದೇ ಒಂದು ದಿನದಲ್ಲಿ ಅವನು ನಾಮಾವಶೇಷವಾಗಿ ಹೋಗಬೇಕಾಗಿತ್ತು. ಆದರೆ ದೈವಯೋಗವು ಬೇರೊಂದು ವಿಧವಾಗಿದ್ದಿತು. ತಾಂತ್ಯಾನ ಸೈನಿಕರು ರಣರಂಗವನ್ನು ಬಿಟ್ಟು ಹೇಡಿಗಳಂತೆ ಓಡಿದರು. ಫರಂಗಿಗಳು ವಿಪ್ಲವಕಾರರ ತೋಪುಗಳನ್ನೂ ಆಹಾರ ಪದಾರ್ಥಗಳನ್ನೂ ಹಿಡಿದರು. ಹ್ಯೂರೋಜ್‌ನ ಸೈನಿಕರು ಸಾವಿರದ ಐನೂರು ಮಂದಿ ವಿಪ್ಲವಕಾರರನ್ನು ಅಟ್ಟಿಕೊಂಡು ಹೋಗಿ ಕತ್ತರಿಸಿ ಹಾಕಿದರು. ಇವರುಗಳು ಇಷ್ಟು ಮಂದಿಯೂ ಹ್ಯೂರೋಜನನ್ನು ಎದುರಿಸಿದ್ದಿದ್ದರೆ ? ಹೇಡಿಗಳಾದ ಆ ಸೈನಿಕರಿಗೆ ಅದು ತೋರಲೇ ಇಲ್ಲ.

ಆದರೆ ಝಾನ್ಸಿಯ ರಾಣಿಯು ಇದರಿಂದ ಹಿಂಜರಿಯಲಿಲ್ಲ. ವೀರರಾದ ಅವಳ ಸೈನಿಕರು ಹಿಂದೇಟು ಹಾಕಲಿಲ್ಲ. ಝಾನ್ಸಿಯ ಆ ರಣಾಂಗಣದಲ್ಲಿ ಅವಳು ಮಹಾಕಾಳಿಯಂತೆ ನಿಂತು ಯುದ್ಧಮಾಡಿದರು. ಅವಳ ಸೈನಿಕರು ವಿದ್ಯುತ್ ಕಣಗಳಂತೆ ಹೋರಿದರು. ಆದರೆ ಫರಂಗಿಗಳು ಹಾರಿಸಿದ ತೋಪುಗಳು ಮದ್ದುಗುಂಡುಗಳ ಕಾರ್ಖಾನೆಯನ್ನೂ ಊರಿಗೆ ಆಶ್ರಯವಾಗಿದ್ದ ಕೆರೆಯನ್ನೂ ಭೇದಿಸಿದವು. ಆ ಕೋಟೆಯನ್ನು ಎಲ್ಲ ಕಡೆಗಳಿಂದಲೂ ಮುತ್ತಿ ಛಿದ್ರ ಛಿದ್ರಮಾಡಲು ಪ್ರಯತ್ನಮಾಡಿದರು.

ತಾಂತ್ಯಾನ ಸೇನೆಗಳು ಓಡಿಹೋದ ಮೂರನೆಯ ದಿನ ಸಂಜೆ ನಸುಗತ್ತಲೆಯಲ್ಲಿ ಝಾನ್ಸಿಯ ರಾಣಿಯ ಕೋಟೆ ಗೋಡೆಯಮೇಲೆ ನಿಂತಿದ್ದಳು. ಅವಳ ಸೈನಿಕರು ವೀರಾವೇಶದಿಂದ ಹೋರುತ್ತಿದ್ದರು. ಆದರೆ—ಗಳಿಗೆಗಳಿಗೆಗೂ ಫರಂಗಿಗಳ ಕೈಮೇಲಾಗುತ್ತಿದ್ದಿತು. ಯುದ್ಧಶಾಸ್ತ್ರ ನಿಪುಣಳಾದ ರಾಣಿಗೆ ಇನ್ನೇನು ಸ್ವಲ್ಪ ಹೊತ್ತಿನಲ್ಲಿ ಕೋಟೆಯು ಶತ್ರುಗಳ ಕೈವಶವಾಗಿ ಹೋಗುವುದೆಂದು ಗೊತ್ತಾಯಿತು. ಅದೊಂದು ಬಗೆಯಾದ ಆವೇಗವು ಅವಳನ್ನು ಸುತ್ತಿಕೊಂಡು ಬಂದಿತು. ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಮಾಡಿದಳು. ಅಳುತ್ತಾ ಕೈಬಿಟ್ಟು ಹೋಗುವ ಕೋಟೆಯನ್ನು ನೋಡುತ್ತಾ ನಿಂತಿದ್ದಳು.

ಝಾನ್ಸೀ ಕೋಟೆಯು ಫರಂಗಿಗಳ ಕೈವಶವಾಗುವುದನ್ನು ನೋಡ ಲಾರದೇ ಸೂರ್ಯಭಗವಾನನು ಅಸ್ತಮಿಸಿದನು. ಕತ್ತಲು ಚೆನ್ನಾಗಿ ಬೀಳು ವುದರೊಳಗಾಗಿ ಕೋಟೆಯ ಬಾಗಿಲನ್ನು ಒಡೆದರು. ಅಲ್ಲಿದ್ದ ಕಾವಲು ಗಾರರನ್ನು ಘಾತಿಸಿ ಫರಂಗಿಗಳು ತಮ್ಮ ಕಾವಲುಗಾರರನ್ನು ಏರ್ಪ ಡಿಸಿದರು.

ಆ ರಾತ್ರಿ ರಾಣಿಯ ಸರ್ದಾರರು ರಾಜಮಹಲಿನಲ್ಲಿ ಸೇರಿದರು. ರಾಣಿಯು ಕಡೆಯ ಬಾರಿ ಝಾನ್ಸೀ ರಾಜ್ಯಸಿಂಹಾಸನದಲ್ಲಿ ಮಂಡಿ ಸಿದಳು. ಲಕ್ಷ್ಮೀಬಾಯಿಯು "ಸರದಾರರೇ! ನಾನು ಹೆಚ್ಚುಮಾತನಾ ಡಲಾರೆ! ಏನು ಮಾತನಾಡಲಿ? ಆಡಿ ತಾನೇ ಏನು ಪ್ರಯೋಜನ? ನಮ ಗೆಲ್ಲರಿಗೂ ಅತ್ಯಂತ ಪ್ರಿಯವಾದ ಕೋಟೆಯು ಈದಿನ ಫರಂಗಿಗಳ ಹಸ್ತಗ ತವಾಗಿ ಹೋಗಿದೆ. ನಾಳೆಯದಿನ ಪ್ರಾತಃಕಾಲ ಅವರು ನಮ್ಮೆಲ್ಲರನ್ನೂ ಸೆರೆ ಹಿಡಿಯುತ್ತಾರೆ. ಇದೇ ರಾತ್ರಿ ಈ ಅರಮನೆಗೆ ಆಸ್ಫೋಟಕವನ್ನಿಟ್ಟು ನಾನೇ ಕೈಯಾರ ಅದನ್ನು ಹೆಚ್ಚಬೇಕೆಂದಿದ್ದೇನೆ. ನೀವು ಇದುವರೆಗೆ ತೋರಿದ ಪ್ರೀತ್ಯಾದರಗಳಿಗಾಗಿ ನಿಮ್ಮನ್ನು ಅಭಿನಂದಿಸುವುದೊಂದು ವಿನಾ ನಿಮ್ಮ ಬಡರಾಣಿಯು ಏನು ತಾನೇ ಮಾಡಬಲ್ಲಳು?" ಎಂದು ಹೇಳಿದಳು.

ಮುಂದೆ ಅವಳಿಂದ ಮಾತನಾಡಲಾಗಲಿಲ್ಲ. ಅವಳ ಕತ್ತು ಕಟ್ಟಿ ಕೊಂಡು ಬಂದಿತು. ದುಃಖವು ಅಡರಿಸಿಕೊಂಡು ಬಂದಿತು.

ಮುದಿ ಸರ್ದಾರನೊಬ್ಬನು ಎದ್ದು ನಿಂತು ಮಾತನಾಡಿದನು—"ರಾಣೀ ಸಾಹೇಬಾ ಕಡೆಯವರೆಗೂ ನಿಮ್ಮೊಡನಿದ್ದು ಸರ್ವವನ್ನೂ ತ್ಯಾಗಮಾಡಿದ ನಮ್ಮನ್ನು ನಡುನೀರಿನಲ್ಲಿ ಕೈಬಿಟ್ಟುಹೋಗುತ್ತೇನೆಂದು ನೀವು ಹೇಳುತ್ತಿ ರುವುದು ನಮ್ಮ ಹೃದಯಗಳನ್ನು ಶಲ್ಯಗಳಿಂದ ಇರಿದಂತಾಗುತ್ತಿದೆ. ಇದುವರೆವಿಗೂ ನಿಮಗೆ ವಿರೋಧವಾಗಿ ಸಹ ಮಾತನಾಡದ ನಾವುಗಳು ಈಗ ನಿಮ್ಮನ್ನು ಪ್ರತಿರೋಧ ಮಾಡುತ್ತೇವೆ. ನೀವು ಹೇಳಿದ ಕಾರ್ಯ ಕ್ರಮವು ಕೂಡದು. ನೀವು ನಮ್ಮ ಜೊತೆಯಲ್ಲಿ ಹೊರಡಿರಿ. ಈ ದುರ್ಗ ವನ್ನು ತ್ಯಾಗಮಾಡಿ ಬ್ರಿಟಿಷ್ ಸೈನ್ಯಗಳನ್ನು ಸೀಳಿಕೊಂಡು ಹೋಗಿ ಪೇಶ್ವೆಯ ಸೈನ್ಯವನ್ನು ಸೇರಿಕೊಳ್ಳೋಣ. ಒಂದು ವೇಳೆ ಅದಾಗದೇ ಹೋದರೆ ಮಾರ್ಗದಲ್ಲಿ ಫರಂಗಿಗಳೊಡನೆ ಹೋರುತ್ತಾ ಅಸುಗಳನ್ನು ನೀಗಿ ವೀರ ಸ್ವರ್ಗವನ್ನು ಸೇರೋಣ!"

ಈ ಮಾತುಗಳನ್ನು ಕೇಳಿ ರಾಣಿಯು ನಕ್ಕಳು. ಅನಂತರ “ ವೃದ್ಧ ಸರದಾರನೇ ! ನಾನೂ ಸಹ ರಣಾಂಗಣದಲ್ಲಿಯೇ ಸಾಯಲು ಅಪೇಕ್ಷೆ ಮಾಡುತ್ತೇನೆ. ಆದರೆ ನಾನು ಹೆಂಗಸು. ಶತ್ರುಗಳು ನನ್ನ ದೇಹಕ್ಕೆಲ್ಲಿ ಅವಮಾನಗೊಳಿಸುವರೋ ಎಂದು ಹೆದರುತ್ತೇನೆ ” ಎಂದಳು.

ದರಬಾರಿನಲ್ಲಿದ್ದ ಸರ್ದಾರರೆಲ್ಲರೂ ಏಕಕಂಠದಿಂದ “ ಅವಮಾನ ! ನಮ್ಮ ರಾಣಿಗೆ ಅವಮಾನ ! ಇಷ್ಟುಮಂದಿಯಲ್ಲಿ ಕಡೆಯವನ ಶರೀರ ದಲ್ಲಿ ಪ್ರಾಣವಿರುವವರೆಗೆ ನಿಮ್ಮ ಪವಿತ್ರವಾದ ಶರೀರವನ್ನು ಸ್ಪರ್ಶಮಾ ಡಲು ಧೈರ್ಯ ಮಾಡುವಂತಹವನ ದೇಹವನ್ನು ನಮ್ಮ ಖಡ್ಗವು ತುಂಡು ಮಾಡುತ್ತದೆ ” ಎಂದು ಕೂಗಿದರು.

ಅರ್ಧರಾತ್ರಿಯ ಸಮಯವಿರಬಹುದು. ರಾಣಿಯು ತನ್ನ ಪ್ರಜೆಗಳೆ ಲ್ಲರಿಗೂ ಸಮಾಧಾನವನ್ನು ಹೇಳಿ ಬೀಳ್ಕೊಟ್ಟಳು. ಅವರುಗಳು ತಮ್ಮ ರಾಣಿಯ ನಿರ್ಗಮನವನ್ನು ಸಹಿಸಲಾರದೇ ಕಣ್ಣೀರು ಸುರಿಸುತ್ತಾ ನಿಂತಿದ್ದರು. ರಾಣಿಯು . ಪುರುಷವೇಷಧಾರಿಣಿಯಾಗಿ ಅರಮ ನೆಯಿಂದ ಹೊರಗೆ ಬಂದಳು. ಒಂದು ಬಿಳಿಯ ಸುರುವಾಲನ್ನು ಧರಿಸಿ ಅದರ ಮೇಲೆ ನೀಳವಾದ ಒಂದು ಬಿಳಿಯಂಗಿಯನ್ನು ಧರಿಸಿದ್ದಳು. ಸೊಂ ಟಕ್ಕೆ ಮಾಸಲು ಕೆಂಪು ಬಣ್ಣದ ನಡುಗಟ್ಟನ್ನು ಕಟ್ಟಿದ್ದಳು. ವಕ್ಷಸ್ಥಲಕ್ಕೂ ಭುಜಗಳಿಗೂ ಕಬ್ಬಿಣದ ಕಂಬಿಗಳಿಂದ ಹೆಣೆದಿದ್ದ ರಕ್ಷಣಾ ಕವಚಗಳನ್ನು ತೊಟ್ಟಿದ್ದಳು. ತಲೆಗೆ ಕಬ್ಬಿಣದ ಟೋಪಿಯನ್ನು ಧರಿಸಿ .ಅದರ ಮೇಲೆ ಕೆಂಪು ಉಷ್ಣೀಷವನ್ನಿಟ್ಟುಕೊಂಡಿದ್ದಳು. .ನೀಳವಾದ ಖಡ್ಗವೊಂದು ಅವಳ ನಡುವಿಗೆ ಕಟ್ಟಲ್ಪಟ್ಟಿತ್ತು. ಅದರ ಪಕ್ಕದಲ್ಲಿ ಎಳೆಯ ನಾಗರದ ಹೆಡೆಯಂತೆ ಅವಳ ಪ್ರೀತಿಯ ಕಠಾರಿಯು ಅಲ್ಲಾಡುತ್ತಿದ್ದಿತು.

ರಾಣಿಯು ಹೊರಗೆ ಬರುವ ವೇಳೆಗೆ ಪಟ್ಟದಾನೆಯು ಸಕಲ ಶೃಂಗಾ ರಗಳಿಂದಲೂ ಸಿದ್ಧವಾಗಿ ಬಂದು ನಿಂತಿದ್ದಿತು. ರಾಣಿಯು ತನ್ನ ಮಗ ದಾಮೋದರನನ್ನು ಒಂದು ಬಟ್ಟೆಯಲ್ಲಿ ಹಾಕಿ ಅದನ್ನು ಬೆನ್ನಿಗೆ ಕಟ್ಟಿ ಕೊಂಡಳು. ಅನಂತರ ಆನೆಯ ಮೇಲೆ ಹತ್ತಿ ಕುಳಿತಳು. ಸರದಾರರು ಅಶ್ವಾರೋಹಿಗಳಾಗಿ ಸಿದ್ಧರಾದರು. ಜನಗಳು ಜಯಕಾರವನ್ನು ಮಾಡುತ್ತಿ ರಲು ಇವರು ಹೊರಟರು.

ಇವರುಗಳೆಲ್ಲರೂ ದುರ್ಗದ ಹೊರಬಾಗಿಲಿಗೆ ಬರುತ್ತಲೇ ಅಲ್ಲಿ ಫರಂಗಿಯವರು ನಿಯಮಿಸಿದ್ದ ಕಾವಲುಗಾರರು ಇವರನ್ನು ತಡೆದು "ನೀವಾರು? ಎಲ್ಲಿಗೆ ಹೋಗುತ್ತೀರಿ?" ಎಂದು ಕೇಳಿದರು.

ಅದಕ್ಕೆ ರಾಣಿಯೊಡನಿದ್ದ ಸರ್ದಾರರು "ನಾವು ಟೆಹ್ರಿ ರಾಜನ ಸೈನಿಕರು. ನಮ್ಮ ದಳವನ್ನು ಕೂಡಿಕೊಳ್ಳಲು ಹೋಗುತ್ತಿದ್ದೇವೆ" ಎಂದರು.

ಅಲ್ಲಿ ಕಾವಲಿದ್ದವರೂ ಟೆಹ್ರಿ ಸೈನಿಕರು. ಅವರು ಆತಂಕ ಮಾಡಲಿಲ್ಲ.

ರಾಣಿಯೂ ಮತ್ತು ಆಕೆಯ ಅನುಚರರೂ ಆ ರಾತ್ರಿಯಲ್ಲಿ ತಮ್ಮ ಪ್ರಿಯವಾದ ದುರ್ಗವನ್ನು ತ್ಯಾಗಮಾಡಿ ರಾವ್‌ಸಾಹೇಬ್ ಪೇಶ್ವೆಯ ಸೇನೆಯು ಬೀಡುಬಿಟ್ಟಿದ್ದ ಕಡೆಗೆ ಹೋದರು.

## ಚಕ್ರವ್ಯೂಹ ಭೇದನ

ಗ್ವಾಲಿಯರ್ ಬಿದ್ದುಹೋಯಿತು! ಕಳಿದುಳಿದ ಸೈನ್ಯದೊಡನೆ ತಾಂತ್ಯಾಟೋಪಿಯೂ ರಾವ್‌ಸಾಹೇಬ್ ಪೇಶ್ವೆಯೂ ಸುಮಾತುರಾ ಗ್ರಾಮದಲ್ಲಿ ಬಂದು ಬಿಡದಿ ಮಾಡಿದರು. ಝಾನ್ಸಿಯ ರಾಣಿಯು ವೀರಸ್ವರ್ಗವನ್ನು ಪಡೆದಳು. ನಾನಾರಾಯನನ್ನು ನೋಡಿ ಬಹಳ ದಿನಗಳಾದವು. ಅವನು ಯಾವ ದಿನ ಎಲ್ಲಿರತ್ತಾನೋ ಅದನ್ನು ತಿಳಿದುಕೊಳ್ಳುವುದೇ ಕಷ್ಟವಾಗಿದ್ದಿತು. ಒಂದುವೇಳೆ ಪ್ರಯಾಸದಿಂದ ಅದನ್ನು ತಿಳಿದುಕೊಂಡರೂ ಅದರಿಂದ ಪ್ರಯೋಜನವಿಲ್ಲ. ಅವನನ್ನು ಸೇರುವುದು ಕಷ್ಟತರವಾದುದು. ಸೇರಿದರೂ ಅಲ್ಲಿ ಹೋಗಿ ಮಾಡುವುದೇನು? ಅವನು ಅಯೋಧ್ಯೆಯ ಬಳಿ ಯುದ್ಧ ಮಾಡುತ್ತಿರುವನೆಂದು ವರ್ತಮಾನವು ಬಂದಿತ್ತು. ಅವನ ಬಳಿ ಹೋಗಿ ಸಹಾಯಕವಾಗಿ ಯುದ್ಧಮಾಡುವುದೇ? ಅದಕ್ಕಿಂತ ಬೇರೊಂದು ಯುದ್ಧಕ್ಷೇತ್ರವನ್ನು ನಿರ್ಮಾಣ ಮಾಡುವುದು ನಾನಾರಾಯನಿಗೆ ಸಹಾಯವಾಗುತ್ತದೆ. ಅದರಿಂದ

ಫರಂಗಿಗಳು ಕೇವಲ ಅಯೋಧ್ಯೆಯ ಮೇಲೆಯೇ ತಮ್ಮ ದೃಷ್ಟಿಯನ್ನು ಕೇಂದ್ರೀಕರಿಸದಂತೆ ಮಾಡಲು ಅವಕಾಶವಾಗುತ್ತದೆ. ತಾನು ಅಯೋಧ್ಯೆಯ ಯುದ್ಧರಂಗವನ್ನು ಪ್ರವೇಶಮಾಡುವುದಕ್ಕಿಂತಲೂ ಬೇರೊಂದು ಯುದ್ಧವನ್ನು ನಿರ್ಮಾಣ ಮಾಡುವುದೇ ತನ್ನ ಕರ್ತವ್ಯವೆಂದು ತಾಂತ್ಯಾಟೋಪಿಯು ಆಲೋಚನೆ ಮಾಡಿದನು.

ಸೈನ್ಯದಲ್ಲಿ ತೋಪುಗಳಿರಲಿಲ್ಲ. ಅವು ಗ್ವಾಲಿಯರ್ ಯುದ್ಧದಲ್ಲಿಯೇ ಕೈಬಿಟ್ಟು ಹೋಗಿದ್ದವು. ಸೈನಿಕರಿಗೆ ಆಯುಧಗಳಿರಲಿಲ್ಲ. ಇದ್ದವುಗಳು ಹಳತಾಗಿದ್ದವು. ಇದೆಲ್ಲದರ ಮೇಲೆ ಮುಖ್ಯವಾಗಿ ಆಹಾರ ಸಾಮಗ್ರಿಗಳಿಲ್ಲ. ಹಣವಿಲ್ಲ. ಇಂತಹ ಸ್ಥಿತಿಯಲ್ಲಿ ಪ್ರಬಲರಾದ ಫರಂಗಿಗಳ ಮೇಲೆ ಯುದ್ಧವನ್ನು ಕಟ್ಟುವುದು ಹೇಗೆ ?

ಆದರೆ ತಾಂತ್ಯಾಟೋಪಿಯು ಇಷ್ಟರಿಂದಲೇ ಹೆದರಲಿಲ್ಲ. ಉತ್ತರ ಹಿಂದೂಸ್ಥಾನದಲ್ಲಿಯೂ ಮಧ್ಯ ಹಿಂದೂಸ್ಥಾನದಲ್ಲಿಯೂ ಸಾಲುಸಾಲಾಗಿ ದೇಶೀ ಸಂಸ್ಥಾನಗಳಿವೆ. ಅಲ್ಲೆಲ್ಲಾ ಬೇಕಾದಷ್ಟು ಹಣವಿದೆ. ಆಯುಧ ಸಂಪತ್ತಿ ಇದೆ. ದವಸಧಾನ್ಯಗಳಿವೆ. ಅವು ರಾಜರುಗಳದೇನು ? ಅಲ್ಲ ! ದೇಶದ್ದು ! ಅದನ್ನು ದೇಶದ ಯುದ್ಧಕ್ಕಾಗಿ ಉಪಯೋಗಿಸಿಕೊಳ್ಳಲು ಅಡ್ಡಿಯೇನಿದೆ ! ರಾಜರುಗಳೇ ಮುಂದೆ ಬಂದು ಅವುಗಳನ್ನು ಒಪ್ಪಿಸಬೇಕು. ಒಪ್ಪಿಸದಿದ್ದರೆ ಕೇಳುವುದು. ಕೊಡದಿದ್ದರೆ ಬಲಾತ್ಕಾರದಿಂದ ತೆಗೆದುಕೊಳ್ಳುವುದು. ರಾಜರುಗಳು ಪ್ರತಿರೋಧ ಮಾಡಬಹುದು ! ಆದರೆ ಅವರ ಸೈನಿಕರೋ, ಅವರ ಪ್ರಜೆಗಳೋ, ಅವರೆಲ್ಲರೂ ವಿಪ್ಲವಕಾರರೊಡನೆಯೇ ಇದ್ದಾರೆ !

ಇಂಗ್ಲೀಷರು ಅನೇಕ ಜಯಗಳನ್ನು ಪಡೆದಿದ್ದಾರೆ. ಸಂಘಟಿತರಾಗಿದ್ದಾರೆ. ಬಲಶಾಲಿಗಳಾಗಿದ್ದಾರೆ. ಇವೆಲ್ಲವನ್ನೂ ಆ ಮರಾಠಾವೀರನು ಯೋಚಿಸಿದನು ಅವರೊಡನೆ ಪ್ರತ್ಯಕ್ಷವಾಗಿ ಯುದ್ಧಮಾಡಬಾರದು. ಅವರು ಎಚ್ಚರವಾಗಿದ್ದಾಗ ಕಣ್ಮರೆಯಾಗಿರಬೇಕು. ಎಚ್ಚರಗೆಟ್ಟಾಗ ಸಿಡಿಲಿನಂತೆ ಬಂದು ಬಿದ್ದು ಹೊಡೆಯಬೇಕು. ಹೀಗೆ ಮಾಡುತ್ತಾ ದಕ್ಷಿಣಕ್ಕೆ ಬಂದು ನರ್ಮದಾನದಿಯನ್ನು ದಾಟಿದರೆ ಮಹಾರಾಷ್ಟ್ರದ ಸಂಸ್ಥಾನಗಳೂ ದಕ್ಷಿಣ ಭಾರತದ ದೇಶೀಸಿಪಾಯಿಗಳೂ ತನಗೆ ಸಹಾಯಕರಾಗುವರೆಂದು ಆಶೆಮಾಡಿದನು.

ತಾಂತ್ಯಾ ಭರತಪುರದ ಮೇಲೆ ಮುತ್ತಿಗೆ ಮಾಡಲು ಸನ್ನಾಹಗಳನ್ನು ಮಾಡಿದನು. ಅಲ್ಲಿ ಬಲವಾದ ಫರಂಗೀ ಸೈನ್ಯವಿದೆ ಎಂದು ಗೊತ್ತಾಯಿತು. ಕೂಡಲೇ ಜಯಪುರದ ಕಡೆಗೆ ತಿರುಗಿದನು. ಈ ವರ್ತಮಾನವನ್ನು ಕೇಳಿ ಕರ್ನಲ್ ಹೋಮ್ಸ್ ನಸೀರ್‌ಬಾದಿನಲ್ಲಿದ್ದ ಫರಂಗೀ ಸೈನ್ಯವನ್ನು ತೆಗೆದುಕೊಂಡು ಜಯಪುರವನ್ನು ಸಂರಕ್ಷಿಸಲು ಹೋದನು. ಆದರೆ ಮರಾಠಾಹುಲಿಯು ಮಿಂಚಿನಂತೆ ಹಾರಿಬಂದು ನಸೀರ್ ಬಾದನ್ನು ಹಿಡಿಯಿತು. ಅಲ್ಲಿಯ ನವಾಬನು ಪ್ರತಿರೋಧಮಾಡಿ ಯುದ್ಧಕ್ಕೆ ಸೈನ್ಯವನ್ನು ಕಳುಹಿಸಿ ತಾನು ಜನಾನಾದಲ್ಲಿ ಅಡಗಿಕೊಂಡನು. ಯುದ್ಧಕ್ಕೆ ಬಂದ ಶಿಪಾಯಿಗಳು ವಿಪ್ಲವಕಾರರನ್ನು ಸಹೋದರರಂತೆ ಆಲಂಗಿಸಿದರು. ಅಲ್ಲಿಂದ ನಾಲ್ಕಾರು ತೋಪುಗಳನ್ನೂ ಸೈನಿಕರನ್ನೂ ಆಹಾರ ಪದಾರ್ಥಗಳನ್ನೂ ತೆಗೆದುಕೊಂಡು ತಾಂತ್ಯಾ ದಕ್ಷಿಣದ ಕಡೆಗೆ ಇಳಿದನು.

ಈ ಸಂದರ್ಭದಲ್ಲಿ ಫರಂಗಿಗಳು ಸುಮ್ಮನಾಗಲಿಲ್ಲ. ಅವರ ವಿವಿಧ ಸೇನಾಧಿಪತಿಗಳು ನಾಲ್ಕು ಕಡೆಗಳಿಂದಲೂ ಸೈನ್ಯಗಳನ್ನು ತೆಗೆದುಕೊಂಡು ಬಂದು ವಿಪ್ಲವಕಾರರನ್ನು ಸುತ್ತುಗಟ್ಟಿದರು. ಅವರಲ್ಲಿ ಒಬ್ಬ ಸೇನಾಧಿಪತಿಯು ಮುಂದೆ ಬಂದು ಎದುರಿಸಿದನು. ವಿಪ್ಲವಕಾರರು ವಿಧಿಯಿಲ್ಲದೇ ಅಲ್ಲಿ ಯುದ್ಧಮಾಡಿದರು. ಆದರವರು ತಿರೋಗಮನ ಮಾಡಬೇಕಾಯಿತು. ಕೆಳಗಡೆ ಚಂಬಾರ್ ನದಿಯು ಹರಿಯುತ್ತದೆ. ಅದರ ದಡದಲ್ಲಿ ಇಂಗ್ಲಿಷ್ ಸೈನ್ಯವು ಬೀಡುಬಿಟ್ಟಿದೆ. ಮೇಲೆ ಅನೇಕ ಕಡೆಗಳಿಂದಲೂ ಸೈನ್ಯಗಳು ಬರುತ್ತಿವೆ. ತಾಂತ್ಯಾ ಒಂದು ತಂತ್ರವನ್ನು ಮಾಡಿದನು. ಒಂದು ಕಡೆ ನದಿಯನ್ನು ದಾಟುವಂತೆ ಇಂಗ್ಲಿಷ್ ಸೈನ್ಯಗಳನ್ನು ಒತ್ತುತ್ತಾ ಮತ್ತೊಂದು ಕಡೆಯಿಂದ ಇಂಗ್ಲಿಷ್ ಸೈನ್ಯಗಳು ನೋಡುತ್ತಿರುವಂತೆಯೇ ನದಿಯನ್ನು ದಾಟಿಬಿಟ್ಟನು.

ಫರಂಗಿಗಳ ಬಲೆಯನ್ನು ಕತ್ತರಿಸಿಕೊಂಡು ಹೊರಗೆ ಬಂದುದಾಯಿತು. ನದಿಯನ್ನು ದಾಟಿದುದಾಯಿತು. ಆದರೇನು ಮಾಡುವುದು? ಪುನಃ ತೋಪುಗಳಿಲ್ಲ. ಆಹಾರವಿಲ್ಲ. ಬರಿಗೈ! ಹಾಗೆಯೇ ತಾಂತ್ಯಾ ಮುಂದೆ ಬಂದನು. ಇಂಗ್ಲೀಷರ ಭಕ್ತನಾದ ಚಿರ್ಲಾಪಟ್ಟಣದ ನವಾಬನು ವಿಪ್ಲವಕಾರರನ್ನು ಎದುರಿಸಿದನು. ಯುದ್ಧದಲ್ಲಿ ನವಾಬನು ಸೋತನು. ತಾಂತ್ಯಾಗೆ ಮೂವತ್ತೆರಡು ತೋಪುಗಳು ಸಿಕ್ಕಿದವು.

ಬೇಕಾದಷ್ಟು ಆಹಾರ ಪದಾರ್ಥಗಳು ಸಿಕ್ಕಿದವು. ಲಕ್ಷಾಂತರ ದ್ರವ್ಯವು ಸಿಕ್ಕಿತು. ಸೈನಿಕರಿಗೆ ಬಟವಾಡೆ ಮಾಡಿ ತಾಂತ್ಯಾ ಇಂದೂರಿನ ಕಡೆಗೆ ಹೊರಟನು.

ಈ ಸಮಾಚಾರವು ತಿಳಿಯುತ್ತಲೇ ಆರುಮಂದಿ ಫರಂಗೀ ಸೇನಾಧಿಪತಿಗಳು ಬಲವಾದ ಸೈನ್ಯಗಳನ್ನು ತೆಗೆದುಕೊಂಡು ವಿವಿಧ ಮಾರ್ಗಗಳಿಂದ ಹೊರಟು ಇಂದೂರಿನ ದಾರಿಯಲ್ಲಿ ತಾಂತ್ಯಾನನ್ನು ತಡೆಯಬೇಕೆಂದು ನಿರ್ಧರಿಸಿ ಹೊರಟರು. ಒಂದು ಸೈನ್ಯವು ವೇಗವಾಗಿ ಬಂದು ತಾಂತ್ಯಾನನ್ನು ಎದುರಿಸಿತು. ಪುನಃ ವಿಪ್ಲವಕಾರರಿಗೆ ಸೋಲಾಯಿತು. ಅವರು ತಿರೋಗಮನ ಮಾಡಿದರು.

ವಿಪ್ಲವಕಾರರ ಸೈನ್ಯವು ಐಸಾಘರದ ಬಳಿಗೆ ಬಂದರು. ಬೆಟ್ವಾ ನದೀತೀರವನ್ನು ಸೇರಿದರು. ಭೀಕರವಾದ ಮಳೆಯು ಆರಂಭವಾಯಿತು. ಫರಂಗೀ ಸೈನ್ಯವು ಪುರೋಗಮನ ಮಾಡಲಾಗಲಿಲ್ಲ. ದೈವಯೋಗದಿಂದ ವಿಪ್ಲವಕಾರರಿಗೆ ಒಂದುವಾರ ವಿಶ್ರಾಂತಿಯು ಸಿಕ್ಕಿತು.

ಈಗೇನು ಮಾಡುವುದು ? ಎತ್ತಹೋಗುವುದು ? ಸುತ್ತಲೂ ಫರಂಗೀ ಸೈನ್ಯಗಳು ಬಳಸಿ ನಿಂತಿವೆ. ನರ್ಮದಾನದಿಯು ಬಹಳ ದೂರವಾಗಿದೆ ! ಅದನ್ನು ದಾಟುವುದು ಹೇಗೆ ?

ಸೈನ್ಯವನ್ನು ವಿಭಾಗಿಸಿದರು. ತಾಂತ್ಯಾ ಒಂದು ಭಾಗವನ್ನೂ ರಾವ್‌ಸಾಹೇಬ್ ಪೇಶ್ವೆಯು ಒಂದು ಭಾಗವನ್ನೂ ತೆಗೆದುಕೊಂಡು ಕಾಡು ದಾರಿಯಲ್ಲಿ ಬೇರೆ ಬೇರೇ ಮಾರ್ಗಗಳನ್ನು ಹಿಡಿದು ಹೊರಟರು. ಪುನಃ ಲಲಿತಪುರದಲ್ಲಿ ವಿಪ್ಲವದ ಈ ನಾಯಕರು ತಮ್ಮ ಸೈನ್ಯಗಳೊಡನೆ ಸಂಧಿಸಿದರು. ಲಲಿತಪುರವು ನರ್ಮದಾ ತೀರದಲ್ಲಿದೆ ! ಸುತ್ತಲೂ ಬಳಸಿಕೊಂಡು ಬರುತ್ತಿದ್ದ ಫರಂಗೀ ಸೇನೆಗಳು ತೀರ ಹತ್ತಿರದಲ್ಲಿವೆ. ಫರಂಗೀ ಸೇನಾಧಿಪತಿಗಳು ಬಲವಾದ ಚಕ್ರವ್ಯೂಹವನ್ನು ನಿರ್ಮಿಸಿದ್ದಾರೆ. ಈ ಬಾರಿಯೂ ತಾಂತ್ಯಾಟೋಪಿಯು ದೊಡ್ಡ ಸಾಹಸವನ್ನು ಮಾಡಿದನು. ಫರಂಗಿಯವರ ಕಣ್ಣಿಗೆ ಮಣ್ಣೆರಚಿ ನರ್ಮದಾನದಿಯನ್ನು ದಾಟಿಬಿಟ್ಟನು.

ಮರಾಠಾ ಸಿಂಹವು ತನ್ನ ಭೂಮಿಗೆ ಬಂದಿದೆ. ಎದುರಿನಲ್ಲಿ ಧಕ್ಕನ ರಾಜ್ಯಗಳು ! ಪಕ್ಕದಲ್ಲಿ ಮಹಾರಾಷ್ಟ್ರ ದೇಶ ! ಅಲ್ಲಲ್ಲಿ ಶಿವಾಜಿಯ ವಂಶಸ್ಥರು ಆಳುತ್ತಿರುವ ಸಂಸ್ಥಾನಗಳು. ಆದರೆ ವಿಧಿವಿಲಾಸವು ಬೇರೊಂದು

ವಿಧವಾಗಿದ್ದಿತು. ತಾಂತ್ಯಾ ಎಣಿಸಿದಂತೆ ಅವನಿಗೆ ಬೆಂಬಲವು ಸಿಕ್ಕಲಿಲ್ಲ. ಸಂಸ್ಥಾನಾಧೀಶ್ವರರು ನಿಸ್ಸತ್ವರಾಗಿದ್ದರು. ಅವರಲ್ಲಿ ವೀರೋದಾತ್ತ ಗುಣ ಗಳು ಇರಲಿಲ್ಲ. ಸೀಪಾಯಿಗಳು ತಪ್ತರಾಗಿದ್ದರು. ಅಲ್ಲಲ್ಲಿ ಪ್ರಜ್ವಲಿತವಾದ ಕ್ರಾಂತಿಯ ನ್ನು ಅಡಗಿಸಲಾಗಿತ್ತು. ಕ್ರಾಂತಿಯು ಮಹಾಸೇನಾಧಿಪತಿಯಾದ ತಾಂತ್ಯಾಟೋಪಿಯು ಒಂದು ವರ್ಷದ ಹಿಂದೆ ಇಲ್ಲಿಗೆ ಬಂದಿದ್ದರೆ? ಅದನ್ನು ನೆನೆಸಿಕೊಂಡು ಈಗ ಪ್ರಯೋಜನವೇನು?

ಪುನಃ ತಾಂತ್ಯಾಟೋಪಿಯು ವಿಪ್ಲವಕಾರರೊಡನೆ ನರ್ಮದಾ ನದಿ ಯನ್ನು ದಾಟಿ ಸುತ್ತುವರಿದಿದ್ದ ಫರಂಗೀ ಸೈನ್ಯಗಳ ಬಲೆಯನ್ನು ಭೇಧಿಸಿ ಕೊಂಡು ಉತ್ತರಭಾರತಕ್ಕೆ ಬಂದನು. ಅಲ್ಲಿ ಎಷ್ಟೋ ಯುದ್ಧಗಳಾದವು. ಅದೆಲ್ಲಾ ದೊಡ್ಡ ಕಥೆ. ಅದರಲ್ಲಿ ತಾಂತ್ಯಾಮಾಡಿದ ಕಡೆಯ ಯುದ್ಧವು ಸಿಖಾರ್‌ನಲ್ಲಿ. ಈ ಯುದ್ಧವಾದನಂತರ ವಿಪ್ಲವಕಾರರಲ್ಲಿ ಭರವಸೆಯು ಹೋಗಿ ಬಿಟ್ಟಿತ್ತು. ಮುಂದೆ ಯುದ್ಧಮಾಡುವುದು ಅಸಾಧ್ಯವಾಗುವಂತೆ ಆಯಿತು.

ತಾಂತ್ಯಾಟೋಪಿಯು ರಾವ್‌ಸಾಹೇಬ್ ಪೇಶ್ವೆಯನ್ನೂ ರಾಜಕು ಮಾರ ಫಿರೋಜ್ ಷಹನನ್ನೂ ಕಂಡು ಮಾತನಾಡಿದನು. ತಾನು ಕೆಲವು ಕಾಲ ಅರಣ್ಯ ಪ್ರಾಂತದಲ್ಲಿದ್ದು ವಿಶ್ರಾಂತಿಯನ್ನು ಪಡೆಯುವುದಾಗಿ ಹೇಳಿ ಭೀಕರವಾದ ಪೆರೋನ್ ಅರಣ್ಯಪ್ರಾಂತವನ್ನು ಪ್ರವೇಶ ಮಾಡಿದನು.

## ಸಹೋದರರು

ತಾಂತ್ಯಾಟೋಪಿಯು ಯಾವ ಅರಣ್ಯ ಪ್ರಾಂತ್ಯವನ್ನು ಪ್ರವೇಶ ಮಾಡಿದನೋ ಅಲ್ಲಿಯೇ ರಾಜಾಮಾನಸಿಂಹನೂ ಬಂದು ಅಡಗಿಕೊಂಡಿ ದ್ದನು. ಮಾನಸಿಂಹನು ನಾರ್‌ವಾರ್‌ನ ಅಧಿಪತಿ. ಗ್ವಾಲಿಯರ್‌ಗೆ ಅಧೀ ನವಾಗಿದ್ದ ಈತನ ಪ್ರಾಂತಗಳಲ್ಲಿ ಕೆಲವನ್ನು ಸಿಂಧ್ಯಾನು ಕಿತ್ತುಕೊಂಡದ್ದ ರಿಂದ ಮಾನಸಿಂಹನೂ ವಿಪ್ಲವವನ್ನು ಸೇರಿದ್ದನು. ಆದರೆ ಪ್ರಬಲವಾದ ಯುದ್ಧವನ್ನು ಕಟ್ಟಲಾಗದೇ ಹಿಂದೆ ತನಗೆ ಸೇರಿದ್ದ ಈ ಅರಣ್ಯವನ್ನು ಅವನೂ ಮರೆ ಹೊಕ್ಕಿದನು. ಅಲ್ಲಿಯೇ ತಾಂತ್ಯಾಟೋಪಿಗೂ ಮತ್ತು

ಮಾನಸಿಂಹನಿಗೂ ಭೇಟಿಯಾಗಿತ್ತು. ಭೇಟಿಯಾದನಂತರ ಇವರಿಬ್ಬರೂ ಒಟ್ಟಿಗೆ ವಾಸಮಾಡುತ್ತಿದ್ದರು.

ವಿಪ್ಲವದ ಈ ನಾಯಕರ ಬಳಿ ಸೈನಿಕರಿರಲಿಲ್ಲ. ಅವರಿಗೆ ಸಹಾಯವಿರಲಿಲ್ಲ. ಸುತ್ತಲೂ ಫರಂಗಿಯವರ ಸೈನ್ಯಗಳಿದ್ದವು. ಐದು ಮೈಲಿಗಳಲ್ಲಿ ಮೂರು ಮೈಲಿಗಳಲ್ಲಿ ಅವರ ಸೈನಿಕರಿದ್ದರು. ಪೆರೋ಼ ಅರಣ್ಯದಲ್ಲಿ ಇವರಿಬ್ಬರೂ ಇದ್ದಾರೆಂದು ಅವರಿಗೆಲ್ಲಾ ಗೊತ್ತಿತ್ತು. ಆದರೆ ದುರ್ಗಮವಾದ ಈ ಅರಣ್ಯ ಪ್ರಾಂತದಲ್ಲಿ ಸಂಚರಿಸುವ ಈ ವನರಾಜರುಗಳನ್ನು ಹಿಡಿಯುವುದು ಅವರಿಗೆ ಅಶಕ್ಯವಾಗಿದ್ದಿತು. ಆ ಪ್ರಾಂತದ ಜನಗಳಿಗೆ ತಾಂತ್ಯಾ ಎಲ್ಲಿದ್ದಾನೆಂಬುದು ತಿಳಿದಿದ್ದರೂ ಅವರು ಫರಂಗಿಗಳಿಗೆ ಆವರ್ತಮಾನವನ್ನು ಕೊಡುವಷ್ಟು ವಿಶ್ವಾಸ ಘಾತಕರಾಗಿರಲಿಲ್ಲ. ತಾಂತ್ಯಾನಂತಹ ವಿಪ್ಲವದ ನಾಯಕನನ್ನು ಹಿಡಿದುಕೊಡುವಷ್ಟು ಆಗ ಕಂಪನಿಯ ಸೈನ್ಯಕ್ಕೆ ಸೇರಿದ್ದ ದೇಶೀಸೀಪಾಯಿಗಳೂ ಫರಂಗಿಯವರಿಗೆ ಸ್ವಾಮಿಭಕ್ತರಾಗಿರಲಿಲ್ಲ.

ಹೀಗಿರುವಾಗ ಒಂದು ದಿನ ತಾಂತ್ಯಾಟೋಪಿಯೂ ಮಾನಸಿಂಹನೂ ಆ ವನಾಂತರಾಳದಲ್ಲಿ ಒಂದು ಕಡೆ ಕುಳಿತು ಮಾತನಾಡುತ್ತಿದ್ದರು. ಅಲ್ಲಿಗೆ ಸಮೀಪದಲ್ಲಿದ್ದ ಗ್ರಾಮವಾದ ಪಿರ್‌ಸಿಮೋ ಥಾಕೂರನಾದ ನಾರಾಯಣಸಿಂಹನು ಬಂದು ಮಾನಸಿಂಹನನ್ನು ನೋಡಿದನು.

ಅವನು ಹೇಳಿದನು–" ಈ ಪ್ರಾಂತದಲ್ಲಿ ಮೀಡೇ ಎಂಬ ಫರಂಗೀ ಸೇನಾಧಿಪತಿಯೊಬ್ಬನು ಬಂದು ಬೀಡುಬಿಟ್ಟಿದ್ದಾನೆ. ದುರ್ಗಮವಾದ ಈ ವನಪ್ರಾಂತದಲ್ಲಿ ರಸ್ತೆಗಳನ್ನು ಮಾಡಿ ಇದನ್ನು ಜಾಲಾಡಿ ನಿಮ್ಮನ್ನು ಹಿಡಿಯಲು ನಿರ್ಧರಮಾಡಿದ್ದಾನೆ. ಮೀಡೆಯು ನನ್ನ ಮನೆಯಲ್ಲಿ ನಿಮ್ಮ ರಾಣೀವಾಸದವರಿರುವುದು ಪತ್ತೆ ಹಚ್ಚಿ ನನ್ನನ್ನು ಕರಸಿದನು. "ನಿನ್ನ ಮನೆಯಲ್ಲಿ ಮಾನಸಿಂಹನ ರಾಣೀವಾಸದವರಿರುವುದು ನಮಗೆ ಗೊತ್ತಾಗಿದೆ. ಅವರು ಕುಂಪಣಿಯವರ ಆಶ್ರಯವನ್ನು ಕೇಳುವುದು ಉಚಿತವಾದುದು. ಇದನ್ನು ನಿರಾಕರಿಸುವುದರೆ ನಮ್ಮ ಬಲಾತ್ಕಾರವೇನೂ ಇಲ್ಲ. ಆದರೆ ನಿಮಗೆ ಸಿಂಧ್ಯಾನ ಭಯವಿದೆ"-ಎಂದು ಹೇಳಿದನು.

"ಆಶ್ರಯ ಕೇಳಿದರೆ ಸರಿ ಇಲ್ಲದಿದ್ದರೆ–ಸಿಂಧ್ಯಾನ ಸೈನಿಕರನ್ನು ಬಿಟ್ಟು ನಿಮ್ಮನ್ನು ಬೇಟೆಯಾಡಿಸುತ್ತೇನೆ"ಎಂದೇ ಆ ಮಾತಿಗೆ ಅರ್ಥವೆಂದು

ನಾನು ತಿಳಿದುಕೊಂಡೆ. " ನಾನು–" ನಮಗೆ ಕುಂಪಣಿಯವರಲ್ಲಿ ದ್ವೇಶ ವಿಲ್ಲ. ಸಿಂಧ್ಯಾನಮೇಲೆ ಮಾತ್ರ ನಮಗೆ ವಿರೋಧ. ಫರಂಗಿಯವರು ರಾಣೀವಾಸದವರಿಗೆ ರಕ್ಷಣೆಯನ್ನು ಕೊಡುವುದಾದರೆ ನಾವು ಒಪ್ಪಿಕೊಳ್ಳು ತ್ತೇವೆ-" ಎಂದು ಹೇಳಿದೆ.

"ಮಿಾಡೆಯು ನನ್ನ ಮನೆಯ ಬಳಿಯೇ ಒಂದು ಮನೆಯನ್ನು ಗೊತ್ತುಮಾಡಿದನು. ರಾಣೀವಾಸದವರು ಅಲ್ಲಿದ್ದಾರೆ. ಫರಂಗೀ ಅಧಿ ಕಾರಿಗಳು ಅವರಿಗೆ ರಕ್ಷಣೆಯನ್ನು ಕೊಟ್ಟಿದ್ದಾರೆ"

ಮಾನಸಿಂಹನು ಈ ಮಾತುಗಳನ್ನು ಕೇಳಿ ರೇಗಿದನು. ತನ್ನನ್ನು ಕೇಳದೇ ಇದೆಲ್ಲವನ್ನೂ ಮಾಡಿದುದೇಕೆಂದು ಹಾರಾಡಿದನು.

ಕಡೆಗೆ ಥಾಕೂರನು ಹೊರಡಲು ಅನುವಾದನು. ಹೋಗುವಾಗ ಮಾನಸಿಂಹನ ಬಳಿ ರಹಸ್ಯವಾಗಿ ಮಾತನಾಡಲು ಅಪೇಕ್ಷೆ ಮಾಡಿದನು. ಮಾನಸಿಂಹನು ಅವನೊಡನೆ ಸ್ವಲ್ಪದೂರ ಹೋದನು.

ಥಾಕೂರನು ಕೇಳಿದನು "ನಮಗೆ ಫರಂಗಿಯವರೊಡನೆ ವಿರೋಧ ವಿಲ್ಲವಲ್ಲ!"

"ಇಲ್ಲ! ಆದರೆ ಪರಿಸ್ಥಿತಿಯು ಎಲ್ಲವನ್ನೂ ಒಂದೇ ಮಾಡಿದೆ. ಪೌರೀದುರ್ಗವನ್ನು ಹಿಡಿಯುವ ಮೊದಲು ನಾನು ಸ್ಮಿತ್‌ನೊಡನೆ ಮಾತ ನಾಡಿದೆ. ನಾನು ಫರಂಗಿಯವರಿಗೆ ವಿರೋಧಿಯಲ್ಲವೆಂದೂ ಸಿಂಧ್ಯಾ ಮಾಡಿಹ ಅನ್ಯಾಯಗಳಿಂದ ಅವನ ಮೇಲೆ ಮಾತ್ರ ಕ್ರೋಧಗೊಂಡಿದ್ದೇ ನೆಂದೂ ಹೇಳಿದೆನು. ಅವನದನ್ನು ಒಪ್ಪಿದರೂ ಈ ಕಾಲದಲ್ಲಿ ಯಾರ ಮೇಲೆಯೂ ವಿರೋಧವೇ ಕೂಡದೆಂದನು. ಅದು ಫರಂಗಿಗಳನ್ನೂ ನಮಗೆ ಶತ್ರುಗಳಾಗಿಯೇ ಮಾಡಿದೆ"

"ಈಗ ವಿಪ್ಲವವು ಭಗ್ನವಾಗಿದೆ. ಇಂಗ್ಲಿಷರೇ ಪ್ರಬಲರಾಗಿದ್ದಾರೆ. ಆರಂಭದಲ್ಲಿ ನಮಗೆ ಅವರೊಡನೆ ವಿರೋಧವಿಲ್ಲ. ಮಧ್ಯಕಾಲದಲ್ಲಿ ಅದು ಸಂಭವಿಸಿತು. ಫರಂಗೀ ಅಧಿಕಾರಿಗಳು ನಮ್ಮನ್ನು ಸ್ನೇಹದಿಂದ ನೋಡು ತ್ತಿದ್ದಾರೆ. ನಮ್ಮ ರಾಜ್ಯಕೋಶಗಳನ್ನೂ ಅಧಿಕಾರಗಳನ್ನೂ ಸಿಂಧ್ಯಾನಿಂದ ಕೊಡಿಸಲು ವಾಗ್ದಾನಮಾಡಿದ್ದಾರೆ. ಹಾಗಿರುವಾಗ ಅವರೊಡನೆ ನಾವೇಕೆ ಸಂಧಿಯನ್ನು ಮಾಡಿಕೊಳ್ಳಕೂಡದು?

"ಅದು ಈಗ ಅಸಂಭವ!"

"ಹಾಗಲ್ಲ! ನಾವು ವಿಪ್ಲವಕ್ಕಾಗಿ ಈ ವಿರೋಧವನ್ನು ಮಾಡಲಿಲ್ಲ. ಕೇವಲ ಸ್ವಂತ ಕಾರಣಗಳಿಗಾಗಿ ಮಾಡಿದೆವು. ಅವು ನೆರವೇರುವಾಗ ನಮಗೆ ವಿರೋಧವೇಕೆ? ಸಂಧಿ-ಸಮರಗಳೆರಡೂ ರಾಜನೀತಿಯ ಎರಡು ಬಾಹುಗಳು"

"ಸಂಧಿಯು ಹೇಗೆ ಸಾಧ್ಯ? ಪ್ರಬಲರಾದ ಫರಂಗಿಗಳು ನಿಸ್ಸತ್ವನಾಗಿರುವ ನನ್ನೊಂದಿಗೆ ಸಂಧಿಯನ್ನು ಅಪೇಕ್ಷಿಸುವುದರಲ್ಲಿ ಏನೋ ಛದ್ಮವಿದೆ ಎಂದು ನನ್ನ ಭಾವನೆ"

"ಹಾಗಲ್ಲ, ಮಹಾರಾಜ! ಈಗ ಫರಂಗಿಗಳಿಗೆ ದೇಶೀರಾಜರುಗಳನ್ನು ತೆಗೆದುಹಾಕಿ ಬಿಡಬೇಕೆಂಬ ಮನೋಭಾವವಿಲ್ಲ. ಆದರಿಂದವರು ದೊಡ್ಡ ಪೆಟ್ಟು ತಿಂದಿದ್ದಾರೆ. ರಾಜರುಗಳ ಬೆಂಬಲದಿಂದಲೇ ಹಿಂದೂಸ್ಥಾನದಲ್ಲಿ ಅವರು ನೆಲಸಬೇಕೆಂದಿದ್ದಾರೆ"

"ಏನೋ ನನಗೆ ಅವೊಂದರಲ್ಲಿಯೂ ನಂಬಿಕೆಯಿಲ್ಲ!"

"ನನಗೆ ಬಿಡಿರಿ! ನಾನು ಸಂಧಿಯನ್ನು ಕುದುರಿಸುತ್ತೇನೆ"

"ನೀನು ನಾಳೆಯ ದಿನ ಬಂದು ನೋಡು!"

ಥಾಕೂರನು ಸಂತೋಷದಿಂದ ಹೊರಟು ಹೋದನು. ಅವನೇನು ಸ್ವಗ್ರಾಮಾಭಿಮುಖವಾಗಿ ಹೋದನೋ, ವಿಧಿಯು ನಿರ್ಮಿಸಿದ ಆಶಾಜ್ಯೋತಿಯಲ್ಲಿ ಪತಂಗದಂತೆ ಬೀಳಲು ಅವನ ಬಿಡಾರಕ್ಕೆ ಹೋದನೋ ನಾವರಿಯೆವು.

ಆದರೆ ಮಾನಸಿಂಹನು ಮಾತ್ರ ಬಂದು ತಾಂತ್ಯಾಟೋಪಿಯನ್ನು ಕಂಡನು. ನಡೆದ ವರ್ತಮಾನವೆಲ್ಲವನ್ನೂ ಹೇಳಿದನು. ಥಾಕೂರನು ಸಂಧಿಯನ್ನು ಕುದುರಿಸುವದಾಗಿ ಹೇಳಿದನೆಂದು ತಿಳಿಸಿದನು.

ಮಾನಸಿಂಹನ ಆಶಾಪೂರಿತವಾದ ಮಾತುಗಳನ್ನು ಕೇಳಿ ತಾಂತ್ಯಾಟೋಪಿಯು ನಕ್ಕನು–"ಮಹಾರಾಜ! ಫರಂಗಿಗಳು ನಿರ್ಬಲನಾದ ನಿನ್ನೊಂದಿಗೆ ಸಂಧಿಯನ್ನು ಪ್ರಸ್ತಾಪಮಾಡುವರೆಂಬುದು ಸುಳ್ಳು! ಶರಣಾಗತನಾಗಲು ನಿನಗೆ ಹೇಳಿ ಕಳಿಸಿದ್ದಾರೆ!" ಎಂದನು.

ಮಾನಸಿಂಹನಿಗೆ ಸಂಧಿಯ ಕಡೆಯೇ ಮನಸ್ಸು ಎಳೆಯುತ್ತಿದ್ದಿತ್ತು. ಸೈನಿಕರಿಲ್ಲ. ಸಹಾಯವಿಲ್ಲ. ಈ ಪರಿಸ್ಥಿತಿಯಲ್ಲಿ ಯುದ್ಧ ಮಾಡುವುದು ದುಸ್ಸಾಧ್ಯವೆಂದು ವಾದಮಾಡಿದನು. ತನ್ನ ಹೆಂಗಸರು ಮಕ್ಕಳು ಫರಂಗಿ

ಯವರಿಗೆ ಸಿಕ್ಕಿ ಬಿದ್ದಿರುವುದಾಗಿ ಗೋಳುಗರೆದನು. ತಾನು ಫರಂಗಿಯ ವರೊಡನೆ ಸಂಧಿಮಾಡಿಕೊಳ್ಳುವುದಕ್ಕೆ ಸಮ್ಮತಿಸಬೇಕೆಂದನು.

ತಾಂತ್ಯಾಟೋಪಿಯು ಮಾನಸಿಂಹನ ಮನೋಭಾವವನ್ನು ಅರ್ಥ ಮಾಡಿಕೊಂಡನು. ವಿಪ್ಲವದ ಜ್ವಾಲೆಗಳಲ್ಲಿ ನಿಲ್ಲಲಾರದ ಈತನನ್ನು ಬಲಾತ್ಕರಿಸುವುದು ಪ್ರಯೋಜನವಿಲ್ಲವೆಂದು ನಿರ್ಧರಿಸಿದನು. ಕಡೆಗೆ–"ಮಾನ ಸಿಂಹ! ನಿನಗೆ ಸೂಕ್ತವೆಂದು ತೋರಿದ ಹಾಗೆ ಮಾಡು" ಎಂದು ಹೇಳಿದನು.

ಮಾರನೆಯ ದಿನ ಬಂದ ಥಾಕೂರನೊಂದಿಗೆ ಮಾನಸಿಂಹನು ಮೀಡೆಯ ಶಿಬಿರಕ್ಕೆ ಹೋದನು. ಶಿಬಿರದ ಸಮೀಪಕ್ಕೆ ಹೋಗುತ್ತಲೇ ದೇಸೀಸೀಪಾಯಿಗಳು ಬಂದು ಮುಜರೆ ಮಾಡಿದರು. ಫರಂಗೀ ಅಧಿಕಾರಿಗಳು ಸ್ವಾಗತಿಸಿದರು. ಶಿಬಿರದ ಬಾಗಿಲಿನಲ್ಲಿ ನಿಂತಿದ್ದ ಮೀಡೆಯು ಮಾನಸಿಂಹನನ್ನು ಒಳಗೆ ಕರೆದುಕೊಂಡು ಹೋದನು. ಸ್ನೇಹ ಸೌಜನ್ಯ ಗಳಿಂದ ಮಾತನಾಡಿದನು. ಮಾನಸಿಂಹನಿಗೆ ಪೂರ್ಣವಾದ ಕ್ಷಮೆಯನ್ನು ಕೊಡಲಾಗಿರುವುದೆಂದು ತಿಳಿಸಿದನು. ರಾಜ್ಯಾಧಿಕಾರಗಳ ವಿಷಯವನ್ನು ಕಂಪನಿಗೆ ಬರೆಯುವುದಾಗಿ ಹೇಳಿದನು. ಅನಂತರ ಮಾನಸಿಂಹನು ಸಿರ್‌ಸಿಮೋಗೆ ಸಮೀಪದಲ್ಲಿ ತನ್ನ ರಾಣೀವಾಸದವರಿದ್ದ ಮನೆಗೆ ಹೋದನು.

ಎರಡು ದಿನಗಳನಂತರ ಮೀಡೆಯು ಮಾನಸಿಂಹನಿಗೆ ಹೇಳಿಕಳುಹಿಸಿದನು. ಮಾನಸಿಂಹನು ಹೋಗಿ ಅವನನ್ನು ಕಂಡನು. ಮೀಡೆಯು "ಮಹಾರಾಜ! ನಿಮ್ಮ ದಳವು ಸಂಪೂರ್ಣವಾಗಿಲ್ಲವೆಂದು ಮೇಲಧಿಕಾರಿಗಳು ಆಕ್ಷೇಪಣೆ ಮಾಡುತ್ತಿದ್ದಾರೆ" ಎಂದನು.

"ನಿಮಗೆ ದಳವೇ ಇಲ್ಲ, ಇದ್ದವರಲ್ಲಿ ಹಲವಾರು ಪೌರೀದುರ್ಗದಲ್ಲಿ ನಾಶವಾದರು, ಕಳೆದುಳಿದವರು ಫಿರೋಜ್‌ಷಹನ ವಿಪ್ಲವಸೈನ್ಯವನ್ನು ಸೇರಿಬಿಟ್ಟಿದ್ದಾರೆ"

"ಅದಲ್ಲ! ನಿಮ್ಮ ದಳಪತಿಗಳು-ನಿಮ್ಮ ತಮ್ಮಂದಿರಾದ ಅಜಿತ ಸಿಂಹರು ಇನ್ನೂ ವಿರೋಧವನ್ನೇ ಮಾಡುತ್ತಿದ್ದಾರೆಂದು ವರ್ತಮಾನವು ಬಂದಿದೆ"

"ಅದೇನು ದೊಡ್ಡ ವಿಷಯವಲ್ಲ. ನಮಗೂ ನಿಮಗೂ ಸ್ನೇಹವಾದ ವಿಷಯ ಅವರಿಗೆ ತಿಳಿಯದು. ಆದರಿಂದ ಅವರು ವಿರೋಧಮಾಡುತ್ತಿರ ಬಹುದು. ನಾನು ಒಂದು ಬಾರಿ ಅವರನ್ನು ಕಂಡರೆ ಅದು ಸರಿಹೋ ಗುತ್ತದೆ!"

"ಅದೇ ಕಂಪನಿಯವರ ಅಭೀಷ್ಟವಾಗಿದೆ. ಇಲ್ಲಿಗೆ ಹದಿನೈದು ಮೈಲಿಗಳ ದೂರದಲ್ಲಿ ಅವರಿದ್ದಾರೆಂದು ವರ್ತಮಾನವು ಬಂದಿದೆ. ತಾವು ಹೋಗಿ ಅವರನ್ನು ನೋಡಿದರೆ ಕುಂಪಣಿಯವರು ನಿಮಗೆ ಋಣಿಗ ಳಾಗಿರುತ್ತಾರೆ."

ತಮ್ಮನನ್ನು ಹೋಗಿ ನೋಡಲು ಮಾನಸಿಂಹನು ಒಪ್ಪಿಕೊಂಡನು. ಅದೇ ದಿನ ಅವನು ಪ್ರಯಾಣವನ್ನೂ ಮಾಡಿದನು. ಮಿಾಡೆಯೂ ನೂರೈ ವತ್ತು ಮಂದಿ ಫರಂಗೀ ಸೈನಿಕರೂ ಕುದುರೆಗಳನ್ನು ಹತ್ತಿ ಅವನ ಹಿಂದೆ ಹೊರಟರು.

ಹದಿನೈದು ಮೈಲಿಗಳ ಪ್ರಯಾಣವನ್ನು ಮಾಡಿ ಅವರೊಂದು ವನ ಪ್ರದೇಶಕ್ಕೆ ಬಂದರು. ಆದರೆ ಹಿಂದಿನ ರಾತ್ರಿಯೇ ಮುಂದಿರುವ ಅರ ಣ್ಯಕ್ಕೆ ಹೋದರೆಂದು ವರ್ತಮಾನವು ಸಿಕ್ಕಿತು. ಪುನಃ ಏಳು ಮೈಲಿಗಳು ಪ್ರಯಾಣಮಾಡಿ ಅಲ್ಲಿಗೂ ಹೋದರು. ಅದೊಂದು ದುರ್ಗಮವಾದ ಅರಣ್ಯ! ಕುದುರೆಗಳನ್ನು ಹತ್ತಿ ಅದನ್ನು ಪ್ರವೇಶ ಮಾಡುವುದು ಸಾಧ್ಯ ವಾಗುತ್ತಿರಲಿಲ್ಲ. ಅದರಿಂದ ಎಲ್ಲರೂ ಕುದುರೆಗಳನ್ನು ಹತ್ತಿ ಅದನ್ನು ಪ್ರವೇಶ ಮಾಡುವುದು ಸಾಧ್ಯವಾಗುತ್ತಿರಲಿಲ್ಲ. ಅದರಿಂದ ಎಲ್ಲರೂ ಕುದು ರೆಗಳನ್ನು ಒಂದು ಕಡೆ ಬಿಟ್ಟು ಆ ಘೋರಾರಣ್ಯವನ್ನು ಪ್ರವೇಶ ಮಾಡಿದರು.

ಮಾನಸಿಂಹನು ಸೈನಿಕರೊಡನೆ ಹೋಗುವುದು ಚೆನ್ನಾಗಿರುವುದಿಲ್ಲ ವೆಂದೂ ಅಂತಹ ಅಗತ್ಯವಿಲ್ಲವೆಂದೂ ಹೇಳಿದನು. ಹಾಗೇ ಆಗಲೆಂದು ಮಿಾಡೆಯೂ ಸೈನಿಕರಿಗೆ ಏನೋ ಹೇಳಿ ಬಂದನು. ಅನಂತರ ಮಾನ ಸಿಂಹನೂ ಮಿಾಡೆಯೂ ಮುಂದೆ ಹೋದರು. ಫರಂಗೀ ಸೈನಿಕರು ಅಜಿತ ಸಿಂಹನನ್ನು ಸುತ್ತುವರಿಯಲು ವಿವಿಧ ಮಾರ್ಗಗಳಲ್ಲಿ ಹೊರಟರು.

ಅಜಿತ ಸಿಂಹನು ಅದೇ ಅರಣ್ಯದಲ್ಲಿದ್ದನು. ಸಣ್ಣದೊಂದು ಗುಡಾರದಲ್ಲಿ ಕುಳಿತಿದ್ದ .ಅಜಿತ ಸಿಂಹನನ್ನು ಮಾನಸಿಂಹನೂ ಮಾಡೆಯೂ ಭೇಟಿಮಾಡಿದರು.

ಮಾನಸಿಂಹನು–" ನಮಗೂ ಕುಂಪಣಿಯವರಿಗೂ ಸ್ನೇಹವಾಗಿದೆ" ಎಂದು ಹೇಳಿದನು.

ಆ ಮಾತು ಕೇಳಿ ಅಜಿತಸಿಂಹನಿಗೆ ಚೇಳು ಕುಟುಕಿದಂತಾಯಿತು. ಆದರೂ ಸಮಾಧಾನವನ್ನು ತಂದುಕೊಂಡು "ಆಗಲಿ, ಸಂತೋಷ!" ಎಂದನು.

"ನಮ್ಮ ರಾಜ್ಯಕೋಶಗಳನ್ನು ಕೊಡಿಸುವುದಾಗಿ ವಾಗ್ದಾನಮಾಡಿದ್ದಾರೆ. ನಮ್ಮನ್ನೆಲ್ಲಾ ಮನ್ನಿಸುವುದಾಗಿ ಹೇಳಿದ್ದಾರೆ. ಇನ್ನು ನಮಗೆ ಯಾರಲ್ಲಿಯೂ ವಿರೋಧವಿಲ್ಲ. ಅಜಿತ! ಬಾ, ಹೋಗೋಣ"

"ಕೃತ್ರಮಿಗಳಾದ ಫರಂಗಿಯವರು ನಿನಗೆ ಇಲ್ಲಸಲ್ಲದ ಆಸೆಗಳನ್ನು ಉಂಟುಮಾಡಿದ್ದಾರೆ. ಅದರಿಂದ ಮೋಸ ಹೋಗಿ ನೀನು ಮಾತನಾಡುತ್ತಿದ್ದೀಯೆ!"

"ಇಲ್ಲ! ಕಂಪನಿಯವರು ಈಗ ರಾಜ್ಯದಾಶೆಯನ್ನು ಬಿಟ್ಟಿದ್ದಾರೆ. ಹಾಗಿಲ್ಲದಿದ್ದರೆ ನಿರ್ಬಲನೂ ನಿಸತ್ವನೂ ಆದ ನನ್ನೊಂದಿಗೆ ಸಂಧಿಯನ್ನೇಕೆ ಕೋರುತ್ತಿದ್ದರು?"

"ದೈವ ಯೋಗದಿಂದ ನೀನು ಮಧ್ಯ ಭಾರತದಲ್ಲಿ ಕ್ರಾಂತಿಯ ನಾಯಕನಾದೆ. ಇಂದು ನಿನ್ನಲ್ಲಿ ಸೈನ್ಯವಿಲ್ಲದಿರಬಹುದು. ಆಯುಧಗಳಿಲ್ಲದಿರಬಹುದು. ಆದರೆ ಮಧ್ಯಭಾರತದ ಪ್ರಜೆಗಳ ಆಶೆಯು ನಿನ್ನಲ್ಲಿ ಕೇಂದ್ರೀಕೃತವಾಗಿದೆ. ಅದನ್ನು ನಿರ್ನಾಮಗೊಳಿಸಲು ಇವರು ತಂತ್ರ ಮಾಡಿದ್ದಾರೆ."

"ಆದರೆ ರಾಜನೀತಿಯು ಬೇರೇ ವಿಧವಾಗಿ ಹೇಳುತ್ತದೆ. ನಮಗೂ ಕುಂಪಣಿಯವರಿಗೂ ವಿರೋಧವಿರಲೇ ಇಲ್ಲ. ನಾವು ಸಿಂಧ್ಯಾನ ಮೇಲೆ ವಿರೋಧ ಕಟ್ಟಿದ್ದು. ಆ ಯುದ್ಧದ ನಡುವೆ ವಿಪ್ಲವವು ಪ್ರಾಪ್ತವಾಯಿತು. ನಮ್ಮ ಯುದ್ಧದಾಶಯವು ನೆರವೇರಿದನಂತರ ವಿಪ್ಲವದಿಂದ ನಮಗೇನು?"

" ಸಿಂಧ್ಯಾನ ಮತ್ತು ನಮ್ಮ ವ್ಯಾಜ್ಯವು ಇಂದು ನಿಷ್ಪ್ರಯೋಜನ ವಾದುದು. ಭಾರತವಾಸಿಗಳ ಮೂಲಮಂತ್ರವು ಇಂದು ವಿಪ್ಲವ! ವಿಪ್ಲವ ದಿಂದಲೇ ಭಾರತೀಯರಿಂದು ಮುಕ್ತರಾಗ ಬೇಕಾಗಿದೆ. ಫರಂಗಿಯವರು ಮಿತ್ರರಾದವರೂ ಅವರು ನಮಗಿಂದು ಶತ್ರುಗಳೇ! ಸಿಂಧ್ಯಾನು ಶತ್ರುವಾದರೂ ನಮಗಿಂದು ಮಿತ್ರನೇ! ಸಿಂಧ್ಯಾನು ತಿರಸ್ಕರಿಸಿದರೂ ಅವನ ಸ್ನೇಹ ವನ್ನು ಕೋರುತ್ತೇನೆ. ಫರಂಗಿಗಳದನ್ನು ನೀಡಿದರೂ ನಾನು ಅದನ್ನು ನಿರಾಕರಿಸುತ್ತೇನೆ!

" ವಿಪ್ಲವವು ಅಡಗಿ ಹೋಗಿದೆ! ಇಂಗ್ಲೀಷರು ಪ್ರಬಲರಾಗಿದ್ದಾರೆ! ಈಗ ನೀನೇನುಮಾಡಬಲ್ಲೆ?"

" ಸಾಯುವವರೆಗೆ ಫರಂಗಿಯವರೊಡನೆ ಹೋರಾಡುತ್ತಾ ಸಾಯುತ್ತೇನೆ"

ಮಿಾಡೇ ಅಣ್ಣತಮ್ಮಂದಿರ ಮಾತುಕಥೆಗಳನ್ನು ಕೇಳಿದನು. ಅಜಿತ್ ಸಿಂಹನು ಹೇಳಿದ ಕಡೆಯ ಮಾತನ್ನೂ ಕೇಳಿದನು. " ಅಜಿತ್ ಸಿಂಹ! ಹಾಗೆ ಸಾಯುವುದಾದರೆ ನೀನು ಈ ಕಾಡಿನಲ್ಲಿಯೇ ಸಾಯಬೇಕಾಗುತ್ತದೆ!" ಎಂದನು.

" ಹಾಗೆ ನೀವು ಕೈ ಎತ್ತುವುದಾದರೆ ನಿಮ್ಮಿಬ್ಬರನ್ನೂ ಇಲ್ಲಿ ಕೊಂದು ಅನಂತರ ಸಿರೋಜ್ ನಲ್ಲಿರುವ ಫಿರೋಜ್ ಷಹನನ್ನು ಸೇರಿಕೊಳ್ಳುತ್ತೇನೆ" ಎಂದು ಉತ್ತರವಿತ್ತನು.

ಪುನಃ ಮಿಾಡೆಯು " ಈ ಅರಣ್ಯ ಪ್ರದೇಶವನ್ನು ನಾಲ್ಕು ಕಡೆಗಳಿಂದಲೂ ನೂರಾರುಮಂದಿ ಫರಂಗೀ ಸೈನಿಕರು ಮುತ್ತಿದ್ದಾರೆ. ನಾನು ಒಂದು ಶಿಳ್ಳೆಯನ್ನೂದಿದರೆ ಅವರೆಲ್ಲರೂ ಬಂದು ನಿನ್ನಮೇಲೆ ಬೀಳುತ್ತಾರೆ" ಎಂದನು.

ಅಜಿತಸಿಂಹನು ತನ್ನ ಖಡ್ಗವನ್ನು ಜಳಪಿಸುತ್ತಾ " ಹರ್! ಹರ್! ಮಹಾದೇವ್!" ಎಂದು ಸಿಂಹನಾದ ಮಾಡಿದನು. ಕೂಡಲೇ ಅಕ್ಕ ಪಕ್ಕಗಳಲ್ಲಿ ಅಡಗಿದ್ದ ನೂರಾರು ಮಂದಿ ವೀರರು ಬಂದು ತಾವೂ ಖಡ್ಗಗಳನ್ನು ಮೇಲೆತ್ತಿ " ಹರ್! ಹರ್! ಮಹಾದೇವ್!" ಎಂದು ಕೂಗಿದರು.

ಆ ಅರಣ್ಯ ಪ್ರವೇಶದಲ್ಲಿ " ಹರ್! ಹರ್! ಮಹದೇವ್!" ಎಂಬ ಶಬ್ದವೇ ತುಂಬಿ ಹೋಯಿತು.

ಮಿಾಡೆಯು ಶಿಳ್ಳೊದಿದನು. ಫರಂಗೀ ಸೈನಿಕರು ತರಗೆಲೆಗಳನ್ನೂ ತುಳಿಯುತ್ತಾ ಬೇಗ ಬೇಗ ನಾಲ್ಕು ಕಡೆಗಳಿಂದಲೂ ಬರುವ ಶಬ್ದವು ಕೇಳಿಸಿತು.

ಅಜಿತಸಿಂಹನು-"ಎಲೈ! ಫರಂಗಿಯೇ! ರಜಪೂತರು ಎಂತಹ ಅಪ್ರತಿಮ ವೀರರೆಂಬುದನ್ನು ನೋಡ.ತ್ತಾ ಇರು" ಎಂದು ಹೇಳಿ ಆ ಅರಣ್ಯದಲ್ಲಿ ಒಂದು ಕಡೆ ನುಗ್ಗಿದನು. ಅವನೊಡನಿದ್ದ ವೀರರೂ ಅವನನ್ನು ಅನುಸರಿಸಿದರು.

ಮರುಕ್ಷಣದಲ್ಲಿಯೇ ನೂರಾರು ಮಂದಿ ಫರಂಗೀ ಸೈನಿಕರು ನಾಲ್ಕಾರು ಕಡೆಗಳಿಂದ ಬಂದರು. ಆದರೆ ಅಷ್ಟು ಹೊತ್ತಿಗೆ ಒಬ್ಬ ವಿಪ್ಲವಕಾರನೂ ಅಲ್ಲಿರಲಿಲ್ಲ.

ಮಿಾಡೆಯೂ, ಮಾನಸಿಂಹನೂ,ಫರಂಗೀ ಸೈನಿಕರೂ ವಿಪ್ಲವಕಾರರು ಹೋದ ಮಾರ್ಗದಲ್ಲಿಯೇ ಹೋಗಿ ಆ ದುರ್ಗಮವಾದ ಅರಣ್ಯದ ಹೊರಗೆ ಬಂದರು. ದೂರದಲ್ಲಿ ವಿಪ್ಲವಕಾರರು ಅಶ್ವಾರೋಹಿಗಳಾಗಿ ದೌಡಾಯಿರುತ್ತಿರುವುದು ಕಂಡು ಬಂದಿತು.

ತಮ್ಮ ಕುದುರೆಗಳನ್ನು ಬಿಟ್ಟಿದ್ದ ಸ್ಥಳಕ್ಕೆ ಹೋದರು. ಅಲ್ಲಿ ಅನೇಕ ಕುದುರೆಗಳು ಮಾಯವಾಗಿದ್ದವು. ಇದ್ದ ನಲವತ್ತು . ಐವತ್ತು ಕುದುರೆಗಳನ್ನು ಹತ್ತಿ ಅಜಿತಸಿಂಹನನ್ನು ಬೆನ್ನು ಹತ್ತಿದರು. ಆದರೆ ಅವನಾಗಲೀ ವಿಪ್ಲವಕಾರರಾಗಲೀ ಸಿಕ್ಕಲೇ ಇಲ್ಲ.

## ಮಿತ್ರ ದ್ರೋಹ

ಮಾನಸಿಂಹನು ಸಿರಸೀವಾಗೆ ಬಂದನು. ತಮ್ಮನು ಆಡಿದ ಮಾತುಗಳಿಂದಲೂ ಅವನ ನಡತೆಯಿಂದಲೂ ಅವನು ಕ್ರುದ್ಧನಾಗಿದ್ದನು. ಫರಂಗೀ ಅಧಿಕಾರಿಯಾದ ಮಿಾಡೆಗೆ ಮುಖ ತೋರಿಸುವುದು ಹೇಗೆಂದು ಯೋಚಿಸುತ್ತಿದ್ದನು. ಮಿಾಡೆಯೇ ಬಂದು ಅವನನ್ನು ನೋಡಿದನು. ನಡದು ಹೋದುದಕ್ಕೆ ವಿಶಾದ ಪಡಬೇಕಾಗಿಲ್ಲವೆಂದೂ, ಅದರಲ್ಲಿ ಮಾನ

ಸಿಂಹನದೇನೂ ತಪ್ಪಿಲ್ಲವೆಂದೂ ಸಮಾಧಾನವನ್ನು ಹೇಳಿದನು. ಅನಂತರ ಮಾನಸಿಂಹನು ಪ್ರತಿದಿನವೂ ಸಂಜೆ ಶಿಬಿರಕ್ಕೆ ಹೋಗಿ ಮಿಾಡೆಯನ್ನು ನೋಡುತ್ತಿದ್ದನು. ಕುಳಿತು ಮಾತನಾಡುತ್ತಿದ್ದನು. ಮಿಾಡೆಯಲ್ಲಿ ಮಾನಸಿಂಹನಿಗೊಂದು ಬಗೆಯಾದ ವಿಶ್ವಾಸವುಂಟಾಯಿತು. ಅವರಿಬ್ಬರೂ ಸ್ನೇಹಿತರಾದರು.

ಒಂದೊಂದು ಬಾರಿ ಮಾನಸಿಂಹನಿಗೆ ವಿಪ್ಲವದ ಆಲೋಚನೆಯು ಬರುತ್ತಿತ್ತು. ಅಜಿತ ಸಿಂಹನ ಮಾತುಗಳು ನಿಜವೆಂದು ಕಂಡುಬರುತ್ತಿದ್ದವು. ಆದರೆ ಎಲ್ಲಿಯ ವಿಪ್ಲವ ? ಆದರೆ ಇನ್ನೆಲ್ಲಿಯವಿಪ್ಲವ ? ಅದು ಇನ್ನು ಸಾರ್ಥಕವಾಗುವುದುಂಟೇ ? ನಾನಾರಾಯನು ನೇಪಾಳದ ಕಡೆಗೆ ಓಡಿ ಹೋಗುತ್ತಿದ್ದಾನೆಂದು ಕೇಳಿದ್ದಾನೆ. ತಾಂತ್ಯಾಟೋಪಿಯು ಓಡಿ ಬಂದು ಅರಣ್ಯದಲ್ಲಿ ಅಡಗಿದ್ದಾನೆ. ಫಿರೋಜ್ ಷಹನು ತಾಂತ್ಯಾಟೋಪಿಯನ್ನು ಆಹ್ವಾನಿಸಿದ್ದಾನೆಂದು ವರ್ತಮಾನ ಬಂದಿದೆ. ಫಿರೋಜ್‌ಗೆ ಇವನು ಹೋಗಿತಾನೇ ಏನುಮಾಡಬಲ್ಲನು ? ರಾವ್‌ಸಾಹೇಬ್ ಪೇಶ್ವೆಯು ಎಲ್ಲೋ ಸುತ್ತುತ್ತಿದ್ದಾನೆ. ವಿಪ್ಲವವು ಅಡಗಿ ಹೋಯಿತು. ಇದು ಇನ್ನು ಪ್ರಯೋಜನವಿಲ್ಲವೆಂದು ತೋರುತ್ತದೆ.

ಫರಂಗಿಗಳ ಸ್ನೇಹವೇ ಪ್ರಯೋಜನಕರವಾದುದೆಂದು ಭಾವನೆ ಮಾಡುತ್ತಾನೆ. ಮಿಾಡೆಯ ಭರವಸೆಗಳಿಂದ ಅವನಿಗೆ ಆಶೆಯು ಬರುತ್ತದೆ. ಸಿಂಧ್ಯೆಯು ಕಸಿದು ಕೊಂಚ ರಾಜ್ಯವನ್ನೆಲ್ಲಾ ಫರಂಗಿಯವರು ಕೊಡಿಸುವರೆಂಬ ಸ್ವಪ್ನದಿಂದ ಅವನಿಗೆ ಸುಖವಾಗುತ್ತದೆ. ಅಂತೂ ಮಾನಸಿಂಹನು ಕ್ರಾಂತಿಯನ್ನು ಮರೆತು ಬಿಟ್ಟಿದ್ದಾನೆ. ಸುಖ ಸಂಪತ್ತುಗಳ ನಿರ್ಮಾಣದಲ್ಲಿ ಆಸಕ್ತನಾಗಿದ್ದಾನೆ.

ಅಜಿತ ಸಿಂಹನನ್ನು ಸಂಧಿಸಿ ಮೂರು ನಾಲ್ಕು ದಿನಗಳಾಗಿದ್ದವು. ಸಾಯಂಕಾಲ ಶಿಬಿರದಲ್ಲಿ ಕುಳಿತು ಮಾತನಾಡುವಾಗ ಮಿಾಡೆಯು ತಾಂತ್ಯಾಟೋಪಿಯ ವಿಷಯವನ್ನು ಪ್ರಸ್ತಾಪಮಾಡಿದನು. ಅವನು ಪರೋಣ ಅರಣ್ಯದಲ್ಲಿಯೇ ವಾಸಮಾಡುತ್ತಿರುವುದು ಖಚಿತವೆಂದನು. ಅದನ್ನು ಹಿಡಿದುಕೊಟ್ಟರೆ ಕುಂಪಣಿಯವರು ಏನು ಪಾರಿತೋಷಕವನ್ನು ಕೊಡುವುದಕ್ಕೂ ತಯಾರಾಗಿದ್ದಾರೆಂದು ತಿಳಿಸಿದನು. ಆ ಕೆಲಸವನ್ನು ಮಾನಸಿಂಹನು ಮಾಡಬಲ್ಲವನಾದರೆ ?ಎಂದು ಆಶೆ ತೋರಿದನು.

ಮೀಡೆಯ ಮಂತ್ರವು ಸಫಲವಾಯಿತು. ಮಾನಸಿಂಹನು ಈ ಕೆಲಸ ದಿಂದ ತನ್ನ ಸರ್ವಸ್ವವೂ ಲಭ್ಯವಾಗುವುದೆಂದು ಬಗೆದನು. ಏನಾದರೂ ಮಾಡಿ ತಾಂತ್ಯಾನನ್ನು ಹಿಡಿದು ಕೊಡಬೇಕೆಂದು ನಿರ್ಧರಿಸಿದನು.

ಮಾನಸಿಂಹನು ಮನೆಗೆ ಬರುವ ವೇಳೆಗೆ ರಾತ್ರಿ ಹನ್ನೊಂದು ಗಂಟೆಯಾಗಿತ್ತು. ಹಿಂದಿನ ದಿನವೇ ತಾಂತ್ಯಾಟೋಪಿಯು ತನಗೆ ಫಿರೋಜ್‌ಷಹನಿಂದ ಕರೆಯು ಬಂದಿದೆ ಎಂದೂ,ತಾನು ಅಲ್ಲಿಗೆ ಹೋಗಲು ಅಪೇಕ್ಷಿಸುತ್ತಿರುವುದಾಗಿಯೂ ಹೇಳಿ ಕಳುಹಿಸಿದ್ದನು. ಅವನು ಹೊರಟು ಹೋದರೆ ತನ್ನ ಆಕೆಯು ನಿರಾಶೆಯಾಗುತ್ತದೆ. ಆದರಿಂದ ಆ ಅರ್ಧರಾತ್ರಿಯಲ್ಲಿ ಠಾಕೂರನೊಂದಿಗೆ ತಾಂತ್ಯಾನನ್ನು ನೋಡಲು ಹೋದನು.

ತಾಂತ್ಯಾಟೋಪಿಯು ಫಿರೋಜ್‌ಷಹನನ್ನು ಕೂಡಿಕೊಳ್ಳಲು ಹೊರಟು ಹೋಗಿರಲಿಲ್ಲ. ಅವನು ಅರಣ್ಯದಲ್ಲಿಯೇ ಇದ್ದನು. ಮಾನಸಿಂಹನು ಹೋಗಿ ಅವನೊಂದಿಗೆ ಮಾತನಾಡಿದನು.

ತಾಂತ್ಯಾ-"ಮಾನಸಿಂಹ! ಫಿರೋಜ್ ಹೇಳಿ ಕಳುಹಿಸಿದ್ದಾನೆ. ಅಲ್ಲಿ ಹೋಗ ಬೇಕೆಂದಿದ್ದೇನೆ. ಇಷ್ಟು ಹೊತ್ತಿಗೇ ಹೊರಟು ಹೋಗುತ್ತಿದ್ದೆ. ಮೈ ಚೆನ್ನಾಗಿಲ್ಲ. ಇನ್ನೆರಡು ಮೂರು ದಿನಗಳು ಸುದಾರಿಸಿ ಕೊಂಡು ಹೋಗ ಬೇಕೆಂದಿದ್ದೇನೆ. ಅಲ್ಲಿಗೂ ಅದೇರೀತಿ ಹೇಳಿ ಕಳಿಸಿದ್ದೇನೆ. ನೀನು ಫರಂಗಿಯವರ ಕಡೆಗೆ ಸೇರಿದ್ದಿ. ಆದರೂ ನಿನ್ನನ್ನು ನಾನು ಸಂಪೂರ್ಣವಾಗಿ ನಂಬುತ್ತೇನೆ. ನನಗೊಂದು ಸ್ಥಳವನ್ನು ತೋರಿಸು. ನಾನು ನಿರಾತಂಕವಾಗಿ ಎರಡು ಮೂರು ದಿನ ವಿಶ್ರಾಂತಿ ತೆಗೆದುಕೊಳ್ಳಲು ಆ ಸ್ಥಳವು ಸರಿಯಾಗಿರಬೇಕು." ಎಂದನು.

ಮಾನಸಿಂಹ – "ಆಗಲಿ. ಇವನ ಜೊತೆಯಲ್ಲಿ ಹೋಗು. ಇವನೆಲ್ಲಿ ತೋರಿಸುತ್ತಾನೆಯೋ ಅಲ್ಲಿ ನಿರಾತಂಕವಾಗಿರು. ಮೂರು ದಿನಗಳಲ್ಲಿ ನಾನೂ ಅಲ್ಲಿಗೆ ಬರುತ್ತೇನೆ" ಎಂದು ಹೇಳಿ ಠಾಕೂರನೊಂದಿಗೆ ತಾಂತ್ಯಾಟೋಪಿಯನ್ನು ಕಳುಹಿಸಿ ತಾನು ಹಿಂತಿರುಗಿದನು.

ಮಾನಸಿಂಹನು ಸಂಗತಿ ಎಲ್ಲವನ್ನು ಮೀಡೇಗೆ ತಿಳಿಸಿದನು. ಆ ಫರಂಗೀ ಅಧಿಕಾರಿಯು ಇದನ್ನು ಕೇಳಿ ಸಂತೋಷದಿಂದ ಉಬ್ಬಿದನು. ಮರಾಠಾ ಸಿಂಹವು ಬೋನಿನಲ್ಲಿದೆ. ಕರೆದುಕೊಂಡು ಹೋಗಿ ತೋರಿಸಲು ವಿಶ್ವಾಸಘಾತಕನಾದ ಮಾನಸಿಂಹನಿದ್ದಾನೆ. ಆದರೂ ತಾಂತ್ಯಾಟೋಪಿಯನ್ನು

ಹಿಡಿದು ತರುವುದು ಮಿಾಡೆಗೆ ಬಹಳ ಕಷ್ಟಕರವಾಗಿದ್ದಿತು. ಈ ವಿಷಯವು ಸೈನಿಕರ ಪಾಳ್ಯದಲ್ಲಿ ಯಾರಿಗಾದರೂ ತಿಳಿದರೆ ಅವರು ಕೂಡಲೇ ತಾಂತ್ಯಾಗೆ ವರ್ತಮಾನವನ್ನು ಕೊಡುತ್ತಾರೆ. ಅವನು ಹೊರಟು ಹೋಗುತ್ತಾನೆ. ವಿಷಯವು ಬಹಳ ಗೋಪ್ಯವಾಗಿರಬೇಕು.

ಆದರೂ ಅವನನ್ನು ಹಿಡಿಯಲು ಮಾನಸಂಹನ ಜೊತೆಯಲ್ಲಿ ಯಾರನ್ನು ಕಳುಹಿಸುವುದು. ಮಾನಸಿಂಹನು ಇಂಗ್ಲಿಷರಿಗೆ ಶರಣಾಗತನಾಗಿ ಅವರ ಕೈಗೊಂಬೆಯಾಗಿರುವನೆಂದು ಪಾಳ್ಯದಲ್ಲಿ ಎಲ್ಲರಿಗೂ ಗೊತ್ತಿತ್ತು. ಹಾಗಿರುವಾಗ ಫರಂಗೀ ಸೈನಿಕರನ್ನು ಕರೆದುಕೊಂಡು ಮಾನಸಿಂಹನು ಹೋದರೆ ಯಾರೋ ಮುಖ್ಯರಾದ ವಿಪ್ಲವದ ನಾಯಕರನ್ನು ಸೆರೆಹಿಡಿಯಲು ಹೋಗುತ್ತಿದ್ದಾರೆಂದು ಪತ್ತೆಯಾಗುವುದು. ಇವರುಗಳು ಪರೋ್ೀ ಕಡೆಗೆ ಹೋಗುವುದರಿಂದ ತಾಂತ್ಯಾಟೋಪಿಯನ್ನು ಹಿಡಿಯಲು ಹೋಗುತ್ತಿದ್ದಾರೆಂದು ಪತ್ತೆಯಾಗುವುದು. ಇವರುಗಳು ಪರೋ್ೀ ಕಡೆಗೆ ಹೋಗುವುದಂಂದ ತಾಂತ್ಯಾಟೋಪಿಯನ್ನು ಹಿಡಿಯಲು ಹೋಗುತ್ತಾರೆಂಬುದನ್ನು ಊಹೆಮಾಡಲು ಕಷ್ಟವೇನಾಗುವುದಿಲ್ಲ. ಹಾಗೇನಾದರೂ ಆದರೆ ಗುಲ್ಲೋ ಗುಲ್ಲಾಗುತ್ತದೆ. ಶಿಬಿರದಲ್ಲಿ ತಾಂತ್ಯಾನ ಗುಪ್ತಚಾರರು ಎಷ್ಟೋಮಂದಿ ಇದ್ದಾರೆ!

ಈ ರೀತಿಯಾಗಿ ಮಿಾಡೇ ಬಹಳ ಆಲೋಚನೆಮಾಡಿದನು. ಕಡೆಗೆ ದೆಸೀಸಿಪಾಯಿಗಳನ್ನೇ ಕಳುಹಿಸುವುದೆಂದು ನಿರ್ಧರಿಸಿದನು. ಆದಿನ ತಾನೇ ಬಂದಿದ್ದ ಬೊಂಬಾಯಿ ಸೈನ್ಯದವರನ್ನು ಕಳಿಸುವುದೆಂದು ಗೊತ್ತು ಮಾಡಿದನು. ಆದರ ದೇಸೀ ಸೇನಾಧಿಪತಿಯನ್ನು ಕರದು "ನಿನಗೀಗ ಹೇಳಲ್ಪಡುತ್ತಿರುವುದು ಬಹಳ ಗುರುತರವಾದ ಕೆಲಸ! ನೀನು ಮಾನಸಿಂಹನ ಜೊತೆಯಲ್ಲಿ ಹೋಗಬೇಕು. ಅವನು ಹೇಳಿದುದನ್ನು ಮಾಡಬೇಕು" ಎಂದು ಹೇಳಿದನು.

ಮಾನಸಿಂಹನು ಈ ದೇಸೀ ಸೈನ್ಯಾಧಿಕಾರಿಯನ್ನೂ ಸೈನಿಕರನ್ನೂ ಕರದುಕೊಂಡು ಹೊರಟರು. ಅವರುಗಳು ಯಾಕೆ ಹೋಗುತ್ತಿದ್ದೇವೆ? ಏನು ಮಾಡುತ್ತಿದ್ದೇವೆ? ಎಂಬುದನ್ನು ತಿಳಿಯದೆ ಅವನ ಹಿಂದೆ ಹೋದರು.

ತಾಂತ್ಯಾಟೋಪಿಯನ್ನು ಮೂರು ದಿನಗಳ ಒಳಗಾಗಿ ಬಂದು ನೋಡುವುದಾಗಿ ಮಾನಸಿಂಹನು ಹೇಳಿದ್ದನು. ಮೂರನೆಯ ದಿನ ಮಧ್ಯ ರಾತ್ರಿಯಲ್ಲಿ ಅವನು ಸೈನಿಕರೊಡನೆ ತಾಂತ್ಯಾ ಅಡಗಿದ್ದ ಸ್ಥಳಕ್ಕೆ ಹೋದನು. ತಾಂತ್ಯಾ ಗಾಢನಿದ್ರೆಯಲ್ಲಿದ್ದನು.

ಮಾನಸಿಂಹನು "ಅಲ್ಲಿ ಮಲಗಿ ನಿದ್ರೆಮಾಡುತ್ತಿರುವವನನ್ನು ದಸ್ತಗಿರಿಮಾಡಿ ಶಿಬಿರಕ್ಕೆ ತೆಗೆದುಕೊಂಡು ಹೋಗಿರಿ! ನಾನು ಹೊರಗಿರುತ್ತೇನೆ" ಎಂದು ಹೇಳಿ ಹೊರಗೆ ಹೋದನು. ಸೈನಿಕರು ನಿದ್ರಿಸುತ್ತಿದ್ದ ತಾಂತ್ಯಾ ಟೋಪಿಯನ್ನು ಹಠಾತ್ತನೆ ಎಬ್ಬಿಸಿದರು.

ತಾಂತ್ಯಾ ಎದ್ದನು. ಸೈನಿಕರ ಕಡೆಗೆ ನೋಡಿದನು. ಅವರನ್ನು ನೋಡಿ ಚಕಿತನಾದನು.

ಅನಂತರ ಕೇಳಿದನು–"ಸೀಪಾಯಿಗಳೇ! ನಾನು ಯಾರೆಂದು ಕೊಂಡಿದ್ದೀರಿ? ಯಾರ ಅಪ್ಪಣೆಯ ಮೇಲೆ ನನ್ನನ್ನು ದಸ್ತಗಿರಿಮಾಡು ತ್ತಿದ್ದೀರಿ?

"ನೀನು ಯಾರಾದರೇನು? ಮಾನಸಿಂಹನ ಅಪ್ಪಣೆಯ ಮೇಲೆ ನಿನ್ನನ್ನು ದಸ್ತಗಿರಿಮಾಡುತ್ತಿದ್ದೇವೆ!"

ತಾಂತ್ಯಾಟೋಪಿಗೆ ಎಲ್ಲವೂ ಅರ್ಥವಾಯಿತು. ಮಾನಸಿಂಹನು ಈರೀತಿ ವಿಶ್ವಾಸಘಾತಕವಾದ ಕಾರ್ಯವನ್ನು ಮಾಡುತ್ತಾನೆಂದು ಅವನು ಕನಸಿನಲ್ಲಿಯೂ ನೆನೆಸಿರಲಿಲ್ಲ. ಸ್ವಂತ ಕಾರಣಗಳಿಂದ ಫರಂಗಿಯವರನ್ನು ಸೇರಿದ್ದರೂ ಇಂತಹ ನೀಚ ಕಾರ್ಯವನ್ನು ಮಾಡಲು ತಯಾರಾಗುವ ನೆಂದು ಭಾವಿಸಿರಲಿಲ್ಲ.

ಈಗೇನು ಮಾಡುವುದೆಂದು ಯೋಚಿಸಿದನು. ಅವನಿಗೇನೂ ತೋರ ಲಿಲ್ಲ. ಬಲಪ್ರದರ್ಶನಮಾಡುವುದೇ? ಐವತ್ತು ಮಂದಿ ಸಹಸ್ರ ಸೀಪಾ ಯಿಗಳ ಎದುರಿನಲ್ಲಿ ರೋಗಗ್ರಸ್ತನಾದ ತಾನೇನು ಮಾಡುವುದು?

ಅಷ್ಟರಲ್ಲಿ ತಾಂತ್ಯಾಗೆ ಬೇರೊಂದು ಆಲೋಚನೆಯು ಹೊಳೆಯಿತು ಅವನು ಪುನಃ ಹೇಳಿದನು. "ಸೀಪಾಯಿಗಳೇ! ನೀವೆಲ್ಲರೂ ದೇಸೀಜನ ಗಳು. ಆಲೋಚನೆಮಾಡಿರಿ. ನೀವು ತಾಂತ್ಯಾಟೋಪಿಯನ್ನು ದಸ್ತಗಿರಿ ಮಾಡುತ್ತಿದ್ದೀರೆಂದು ತಿಳಿದುಕೊಳ್ಳಿರಿ! ಅನಂತರ ನಿಮಗೆ ತೋರಿದಂತೆ ಮಾಡಿರಿ!"

ತಾಂತ್ಯಾಟೋಪಿ ಎಂಬ ಮಾತನ್ನು ಕೇಳಿ ಸೀಪಾಯಿಗಳು ಬೆಚ್ಚಿ ಬಿದ್ದರು. ತಾಂತ್ಯಾನನ್ನು ಹಿಡಿದಿದ್ದವರು ಕೂಡಲೇ ಕೈಬಿಟ್ಟರು.

" ನೀವು ತಾಂತ್ಯಾಟೋಪಿಗಳಾದರೆ ನಾವು ಬಿಟ್ಟು ಹೋಗುತ್ತೇವೆ. ದೂರದಲ್ಲಿರುವ ಮಾನಸಿಂಹನ ಕಣ್ಣಿಗೆ ಮಣ್ಣೆರಚಿ ಶಿಬಿರವನ್ನು ಸೇರಿಕೊಳ್ಳು ತ್ತೇವೆ. ನೀವು ತಾಂತ್ಯಾಟೋಪಿಗಳೆನ್ನುವುದಕ್ಕೆ ಗುರುತೇನು ಹೇಳಿರಿ !

ತಾಂತ್ಯಾ ಬಳಿ ಯಾವ ಗುರುತೂ ಇರಲಿಲ್ಲ. " ಸೀಪಾಯಿಗಳೇ ! ನಾನೇ ನನಗೆ ಗುರುತು. ನಾನೇ ತಾಂತ್ಯಾಟೋಪಿ ಎಂದು ಹೇಳುವು ದಕ್ಕಿಂತಲೂ ಇನ್ನೇನು ಗುರುತು ತಾನೇ ಕೊಡಬಲ್ಲೆ ? "

" ನಾವು ನಂಬುವುದಿಲ್ಲ. ವಿಪ್ಲವದ ನಾಯಕನಾದ ತಾಂತ್ಯಾಟೋ ಪಿಯು ಸಿರೋಜ್‌ನಲ್ಲಿ ಹೋರಾಡುತ್ತಿದ್ದಾನೆಂದು ನಮಗೆ ಗೊತ್ತಿದೆ "

" ಸೀಪಾಯಿಗಳೇ ! ಇನ್ನೊಂದು ಮಾತನ್ನು ಕೇಳಿರಿ. ನಾನು ತಾಂತ್ಯಾಟೋಪಿಯಾಗಿದ್ದೇನೆಂದು ಇಟ್ಟುಕೊಳ್ಳಿರಿ ! ದೇಸೀಸೀಪಾಯಿಗ ಳಾಗಿ ನೀವು ನನ್ನನ್ನು ಹಿಡಿದುಕೊಂಡು ಹೋಗುವುದು ಸರಿಯಲ್ಲ. ನಾನು ತಾಂತ್ಯಾಟೋಪಿಯಲ್ಲವೆಂದುಕೊಂಡರೂ ನನ್ನನ್ನು ಬಿಟ್ಟು ಬಿಡುವುದ ರಿಂದ ನಿಮಗೆ ನಷ್ಟವೇನೂ ಇಲ್ಲ ! "

" ತಾಂತ್ಯಾಟೋಪಿ ಎಲ್ಲಿ ? ವಿಶ್ವಾಸಘಾತಕನಾದ ನೀನೆಲ್ಲಿ ? ನಾವು ನಿನ್ನನ್ನು ಬಿಡುವುದಿಲ್ಲ.

ಆಮಾತು ಕೇಳಿ ತಾಂತ್ಯಾಗೆ ಕೋಪವು ಬಂದಿತು. ಅವನು ಹೇಳಿ ದನು. " ನನ್ನನ್ನು ವಿಶ್ವಾಸಘಾತಕನೆನ್ನುವನ ನಾಲಿಗೆಯನ್ನು ಸೀಳು ತ್ತೇನೆ. ಮಿಾಡೇ ಮತ್ತು ಮಾನಸಿಂಹರು ನನ್ನನ್ನು ಹಿಡಿಯಲು ಮಸ ಲತ್ತು ಮಾಡಿದ್ದಾರೆ. ಆದ್ದರಿಂದ ನೀವು ನನ್ನನ್ನು ಕೇವಲ ಒಬ್ಬ ವಿಪ್ಲವ ಕಾರನೆಂದು ಪರಿಗಣಿಸಿದರೂ ಸಾಕು "

" ನೀನು ಕೇವಲ ವಿಪ್ಲವಕಾರನಾಗಿದ್ದರೂ ನಾವು ನಿನ್ನನ್ನು ಬಿಡು ಗಡೆ ಮಾಡುತ್ತಿದ್ದೆವು. ಆದರೆ ನೀನು ವಿಪ್ಲವಕಾರನಲ್ಲವೆಂದು ನಮ್ಮ ಭಾವನೆ. ಒಂದು ವೇಳೆ ನೀನು ವಿಪ್ಲವಕಾರನಾಗಿದ್ದರೆ, ದ್ರೋಹಿಯಾದ ಮಾನಸಿಂಹನ ಈ ಅರಮನೆಯಲ್ಲಿ ಯಾಕೆ ಇರುತ್ತಿದ್ದೆ ? ಸಿರೋಜ್ ನಲ್ಲಿಯೇ ಯುದ್ಧಮಾಡುತ್ತಿರದೇ, ಈ ಅರಣ್ಯದಲ್ಲಿ ಯಾಕೆ ತಲೆ ಮರಸಿ ಕೊಂಡಿರುತ್ತಿದ್ದೆ ? ನೀನು ಮಾನಸಿಂಹನ ಮಿತ್ರ. ಆದ್ದರಿಂದ ಅವನ

ಮನೆಯಲ್ಲಿದ್ದೀ. ಅವನೂ ನೀನೂ ಸೇರಿ ಏನೋ ಪಿತೂರಿಮಾಡುತ್ತಿದ್ದಿರ ಬೇಕು. ನಿನಗೂ ಮಾನಸಿಂಹನಿಗೂ ಮನಸ್ತಾಪ ಬಂದು ಅವನು ಈಗ ನಿನ್ನ ದಸ್ತಗಿರಿಮಾಡಿಸುತ್ತಿದ್ದಾನೆ. ನೀನು ಹೊರಗಿದ್ದರೆ ವಿಪ್ಲವಕ್ಕೆ ಏನಾದರೂ ಭಾಧಕವಾಗಬಹುದು! ಅದರಿಂದ ಫರಂಗಿಗಳ ಬಂಧನದಲ್ಲಿ ಬಿದ್ದಿರು."

ಇನ್ನು ಮಾತನಾಡುವುದು ಉಪಯೋಗವಿಲ್ಲವೆಂದು ತಾಂತ್ಯಾಟೋಪೆಯು ಸುಮ್ಮನಾದನು. ಒಂದು ಬಾರಿ ಮೈಕೊಡವಿದನು. ಹಿಡಿದಿದ್ದ ಸೈನಿಕರಿಬ್ಬರ ಹಿಡಿತವು ತಪ್ಪಿಹೋಯಿತು. ಅವರ ಕೈಗೆ ಸಿಕ್ಕದಂತೆ ಬಗ್ಗಿ ಮುಂದೋಡಿದನು. ಆದರೆ ಆ ಐವತ್ತು ಮಂದಿಯಿಂದ ಅವನು ತಪ್ಪಿಸಿಕೊಂಡು ಹೋಗಲಾಗಲಿಲ್ಲ. ಓಡಿಹೋಗಿ ಅವನನ್ನು ಹಿಡಿದರು. ಶಿಬಿರಕ್ಕೆ ಕರದುಕೊಂಡು ಹೋದರು. ಶಿಬಿರವನ್ನು ತಲುಪುವ ವೇಳೆಗೆ ಬೆಳಗಾಗಿತ್ತು.

ಸಿರಸಿಯಲ್ಲಿ ಜನರಲ್ ಮೀಡೆಯು ಕೋರ್ಟ್ ಮಾರ್ಷಲ್ ವಿಚಾರಣೆಯನ್ನು ಏರ್ಪಡಿಸಿದನು. ಈ ವಿಚಾರಣೆಯು ಮೂರು ದಿನಗಳ ಕಾಲ ನಡೆಯಿತು. ಭಾರತದ ವಿವಿಧ ಕಡೆಗಳಿಂದ ಸಹಸ್ರಾರು ಮಂದಿ ಬಂದು ದಿನವೂ ಅವನ ದರ್ಶನಮಾಡಿಕೊಂಡು ಹೋಗುತ್ತಿದ್ದರು. ಆಕಾಲದಲ್ಲಿ ಅವನನ್ನು ದೈವಾಂಶ ಸಂಭೂತನೆಂದು ತಿಳಿದುಕೊಂಡಿದ್ದ ಆ ಜನಗಳು ಅವನ ಕಾಲಿಗೆ ಬಿದ್ದು ಮಣಿಯುತ್ತಿದ್ದರು.

ತಾಂತ್ಯಾಟೋಪಿಯನ್ನು ಮಾರ್ಷಲ್ ಕೋರ್ಟಿನಲ್ಲಿ ನ್ಯಾಯಾಧೀಶರೆದುರಿಗೆ ನಿಲ್ಲಿಸಿದರು. ಕುಂಪಣಿಯ ಪರ ವಕೀಲನು ಎದ್ದುನಿಂತು- "ಬ್ರಿಟಿಷ್ ಸರ್ಕಾರದ ವಿರುದ್ಧವಾಗಿ ನೀನು ಯುದ್ಧವನ್ನು ಹೂಡಿದ್ದೀ ಎಂಬದಾಗಿ ನಿನ್ನಮೇಲೆ ಆಪಾದನೆಯನ್ನು ತರಲಾಗಿದೆ" ಎಂದುಹೇಳಿದನು.

ತಾಂತ್ಯಾ ಅದಕ್ಕೆ ಉತ್ತರವನ್ನು ಹೇಳದೇ ಮೌನವಾಗಿ ನಿಂತಿದ್ದನು.

ಜಡ್ಜ್ ಅಡ್ವೋಕೇಟ್ ಕೇಳಿದನು. "ನೀನೇನು ಹೇಳುತ್ತೀಯೆ? ನಿನ್ನ ಮೇಲೆ ತರಲಾಗಿರುವ ಆಪಾದನೆಯು ಸುಳ್ಳೆಂದು ಸಾಬೀತು ಮಾಡಲು ನಿನ್ನ ಬಳಿ ಸಾಕ್ಷ್ಯವೇನಾದರೂ ಉಂಟೋ?"

"ನಾನೇನು ಮಾಡಿದ್ದೇನೋ ಅದೆಲ್ಲವನ್ನೂ ನನ್ನ ಯಜಮಾನರುಗಳ ಆಜ್ಞೆಯಂತೆ ಮಾಡಿದ್ದೇನೆ. ನಾನು ಕಾಲ್ಪಿಗೆ ಹೋಗುವವರೆಗೆ

ನಾನಾರಾಯನ ಅಧೀನದಲ್ಲಿಯೂ ಅಲ್ಲಿಗೆ ಹೋದನಂತರ ರಾವ್ ಸಾಹೇಬ್ ಪೇಶ್ವೆಯ ಅಧೀನದಲ್ಲಿಯೂ ಅವರ ಆಜ್ಞೆಗಳಿಗೆ ಅನುಗುಣವಾಗಿ ಕೆಲಸ ಮಾಡಿದ್ದೇನೆ. ನಾನು ಪೇಶ್ವೆಗಳ ಸೇವಕ ! ಅವರ ಆಜ್ಞಾಪಾಲನೆಯು ನನ್ನ ಅವಶ್ಯ ಕರ್ತವ್ಯ ! ಫರಂಗಿಗಳೊಡನೆ ನಾನು ಯುದ್ಧ ಮಾಡಿದುದರಲ್ಲಿ ನನ್ನ ಅಪರಾಧವೇನೂ ಇಲ್ಲ. ನಾನು ಫರಂಗಿಗಳ ಪ್ರಜೆಯೂ ಅಲ್ಲ ! ಅವರ ಸೇವಕನಾಗಿಯೂ ಇರಲಿಲ್ಲ. ಪೇಶ್ವೆಗಳು ಫರಂಗಿಗಳ ವಿರುದ್ಧವಾಗಿ ಯುದ್ಧಮಾಡಿದರು. ಪೇಶ್ವೆಗಳ ಪ್ರಜೆಯೂ ಅವರ ಸೇವಕನೂ ಆದ ನನ್ನನ್ನು ಅವರು ತಮ್ಮ ಸೇನಾಧಿಪತಿಯಾಗಿ ನಿಯಮಿಸಿದರು. ನಾವು ವೀರರಂತೆ ಯುದ್ಧಮಾಡಿದ್ದೇವೆ. ನಾನಾಗಲೀ, ನಾನಾರಾಯನಾಗಲೀ ಫರಂಗಿಗಳನ್ನು ಹಿಂಸಿಸಲಿಲ್ಲ. ಕೊಲ್ಲಲಿಲ್ಲ. ಅವರನ್ನು ಗಲ್ಲಿಗೆ ಹಾಕಲಿಲ್ಲ. ಇಷ್ಟೆ ! ನಾನು ಇನ್ನೇನೂ ಹೇಳಲಪೇಕ್ಷೆ ಮಾಡುವುದಿಲ್ಲ. ಇನ್ನು ಈ ವಿಚಾರಣೆಯಲ್ಲಿ ನಾನು ಭಾಗವಹಿಸುವುದೂ ಇಲ್ಲ ! ”

ಆದರೆ ಮಾರ್ಷಲ್ ಕೋರ್ಟ್‌ನವರು ವಿಚಾರಣೆಯನ್ನು ನಿಲ್ಲಿಸಲಿಲ್ಲ. ತಾಂತ್ಯಾಟೋಪಿಯ ಡೈರಿಯನ್ನು ಫರಂಗಿಯವರು ವಶಪಡಿಸಿಕೊಂಡಿದ್ದರು. ಅದನ್ನು ಯಾರಿಂದಲೋ ಓದಿಸಿ ತಾಂತ್ಯಾಟೋಪಿಯು ಯಾವ ರೀತಿಯಾಗಿ ಹೋರಾಡಿದನೆಂಬುದನ್ನು ಬರೆದುಕೊಂಡರು.

ತಾಂತ್ಯಾಟೋಪಿಯ ವಿಚಾರಣೆಯು ಮೂರು ದಿನಗಳ ಕಾಲ ನಡೆಯಿತೆಂದು ಮೊದಲೇ ಹೇಳಿದ್ದೇವೆಯಷ್ಟೆ ! ಈ ಮೂರು ದಿನಗಳ ದೀರ್ಘವಾದ ವಿಚಾರಣೆಯು ಅವನಿಗೆ ಬೇಜಾರಾಯಿತು.

ತನ್ನ ಕೈಗಳನ್ನು ಮೇಲೆತ್ತಿ ಒದರಿದನು. ಆ ವೀರನ ಕೈಗಳಲ್ಲಿದ್ದ ಸಂಕೋಲೆಗಳು ಶಬ್ದಮಾಡಿದವು. ಸಿಂಹದಂತೆ ಅವನು ಮಾತನಾಡಿದನು. “ ನನಗೆ ಈ ವಿಚಾರಣೆಯು ಬೇಡ ! ಇದರಲ್ಲಿ ಭಾಗವಹಿಸುವುದು ನನಗೆ ಇಷ್ಟವಿಲ್ಲ. ಸುಮ್ಮನೆ ನನ್ನನ್ನೇಕೆ ಬೇಜಾರುಮಾಡುತ್ತೀರಿ ! ನಾನು ಮಾಡಿದ ರೀತಿಯಲ್ಲಿ ಬ್ರಿಟಿಷರೊಡನೆ ಹೋರಾಡುವವರು ಮರಣಕ್ಕೆ ಸಂಸಿದ್ಧರಾಗಿರಬೇಕೆಂಬುದು ನನಗೆ ಗೊತ್ತೇ ಇದೆ ! ”

ಆ ಮಾತುಗಳನ್ನು ಕೇಳಿ ಕೋರ್ಟ್‌ಗೆ ಕೋರ್ಟೇ ಒಂದು ಕ್ಷಣಕಾಲ ಸ್ತಬ್ಧವಾಯಿತು.

ತಾಂತ್ಯಾಟೋಪಿಯು ಪುನಃ ಕೂಗಿ ಹೇಳಿದನು. " ಫರಂಗಿಗಳೇ ! ನಾನು ಯಾರನ್ನೂ ಎಂದೂ ಬೇಡಿದವನಲ್ಲ ! ಶತ್ರುಗಳನ್ನು ಏನಾದರೂ ಕೇಳಿ ಪಡೆಯ ಬೇಕೆಂಬುದು ನನ್ನ ಕನಸು ಮನಸ್ಸಿನಲ್ಲಿಯೂ ಬಂದಿಲ್ಲ. ಆದರೆ ನಿಮ್ಮನ್ನು ಒಂದು ಯಾಚನೆ ಮಾಡುತ್ತೇನೆ. ಅದನ್ನು ನಡೆಸಿ ಕೊಡಿರಿ. ಈ ನಿರ್ಬಂಧದಲ್ಲಿ ನನ್ನ ದೇಹವು ನನಗೆ ಹುಣ್ಣಿನಂತಾಗಿದೆ. ನನ್ನ ಮನಸ್ಸು ಕುದಿಯುತ್ತಿದೆ. ನನ್ನನ್ನು ಕೂಡಲೇ ಗಲ್ಲಿಗೆ ಹಾಕಿಬಿಡಿರಿ! ಅಥವಾ ತೋಪಿನ ಬಾಯಿಗೆ ಕಟ್ಟಿಸಿ ಬಿಡಿರಿ ! "

ಶುಕ್ರವಾರದ ದಿನ ಕೋರ್ಟ್ ಮಾರ್ಷಲ್ ವಿಚಾರಣೆಯು ಮುಗಿದು ಹೋಯಿತು. ತಾಂತ್ಯಾಟೋಪಿಯನ್ನು ಗಲ್ಲಿಗೆ ಹಾಕಬೇಕೆಂಬುದಾಗಿ ತೀರ್ಪು ಕೊಡಲಾಯಿತು. ಅದೇ ದಿನ ಮಧ್ಯಾಹ್ನ ನಾಲ್ಕು ಗಂಟೆಗೆ ವಧಾಸ್ಥಳಕ್ಕೆ ಅವನನ್ನು ಕರದುಕೊಂಡು ಹೋದರು.

ವಧಾಸ್ಥಾನದಲ್ಲಿ ಜಾತ್ರೆಗೆ ಸೇರಿದಂತೆ ಜನಗಳು ಸೇರಿದ್ದರು. ಸಹಸ್ರ ಸಹಸ್ರ ಸಂಖ್ಯೆಯಲ್ಲಿ ಸೀಪಾಯಿಗಳೂ ಜನಗಳೂ ಸೇರಿದ್ದರು. ತಾಂತ್ಯಾಟೋಪಿಯು ಸ್ಥಿರವಾಗಿ ಗಂಭೀರವಾಗಿ ನಡದು ಬಂದನು. ವೇದಿಕೆಯ ಬಳಿ ಬಂದು ನಿಂತುಕೊಂಡನು. ಫರಂಗೀ ಅಧಿಕಾರಿಗಳು ಕೋರ್ಟ್ ಮಾರ್ಷಲ್‌ನ ತೀರ್ಪನ್ನು ಓದಿ ಹೇಳಿದರು.

ಅನಂತರ ತಾಂತ್ಯಾಟೋಪಿಯು ಧೀರನಂತೆ ಆ ವೇದಿಕೆಯನ್ನು ಹತ್ತಿ ನಿಂತುಕೊಂಡನು. ಗಲ್ಲಿಗೆ ಹಾಕುವವರು ಮಾಮೂಲಾಗಿ ಕೈಕಾಲುಗಳನ್ನು ಕಟ್ಟುವುದಕ್ಕೆ ಬಂದರು. ತಾಂತ್ಯಾಟೋಪಿಯು ಒಂದು ಬಾರಿ ಮುಗುಳು ನಗೆಯನ್ನು ನಕ್ಕು-"ಈ ಮಾಮೂಲುಗಳೊಂದೂ ಬೇಕಾಗಿಲ್ಲ" ಎಂದು ಹೇಳಿ ಗಲ್ಲಿನ ಮರದ ನೇಣನ್ನು ಪುಷ್ಪಹಾರವನ್ನು ಧರಿಸಿದಂತೆ ಕತ್ತಿಗೆ ಹಾಕಿಕೊಂಡನು.

ಕ್ಷಣಾರ್ಧದಲ್ಲಿ ನೇಣಿನ ಹಗ್ಗವು ಎಳೆಯಲ್ಪಟ್ಟಿತು. ವಿಪ್ಲವದ ಸೇನಾಧಿಪತಿಯು ಈರೀತಿಯಾಗಿ ಗಲ್ಲಿಗೆ ಹಾಕಲ್ಪಟ್ಟುದರಿಂದ ಫರಂಗಿಗಳು ಆನಂದದಿಂದ ಕೂಗುತ್ತಾ-ಕಿರುಚುತ್ತಾ ಹೋದರು. ನಿಸ್ಸತ್ವರಾಗಿದ್ದ ದೇಶೀ ಸೀಪಾಯಿಗಳೂ ಜನಗಳು ಕಣ್ಣೀರು ಕರೆಯುತ್ತಾ ಹೊರಟು ಹೋದರು. ತಾಂತ್ಯಾಟೋಪಿಯ ದೇಹವು ರಕ್ತದಿಂದ ನೆನೆದು ಗಲ್ಲಿನ ಮರದ ಮೇಲೆ ತೂಗಾಡುತ್ತಿತ್ತು .

## ಹಿಮವತ್ಪರ್ವತ ಪ್ರಾಂತದಲ್ಲಿ

ಭಾರತದಲ್ಲಿ ಕುಂಪನಿಯ ಅಧಿಕಾರವು ಸ್ಥಾಗನೆಯಾದ ನೂರನೆಯ ವರ್ಷಕ್ಕೆ ಸರಿಯಾಗಿ ಅದು ನಾಮಾವಶೇಷವಾಗುತ್ತದೆಂದು ಹೇಳಲ್ಪಡುತ್ತಿದ್ದಿತಷ್ಟೆ! ಅದೊಂದು ವಿಧವಾಗಿ ನಿಜವೇ ಆಯಿತು. ಪ್ಲಾಸೀಕದನವಾದ ನೂರು ವರ್ಷಗಳಿಗೆ ಸರಿಯಾಗಿ ಕುಂಪಣಿಯ ಅಧಿಕಾರವು ಭಾರತದಲ್ಲಿ ಸಮಾಪ್ತಿಗೊಂಡಿತು. ಆದರೇನು? ಅದಕ್ಕೆ ಬದಲಾಗಿ ಇಂಗ್ಲೆಂಡಿನ ರಾಣಿಯ ಆಡಳಿತವು ಆರಂಭವಾಯಿತು. ಒಂದು ಇಸ್ತಿಹಾರುನಾಮೆಯನ್ನು ಪ್ರಕಟಗೊಳಿಸುವುದರ ಮೂಲಕ ಇದು ಎಲ್ಲರಿಗೂ ಗೊತ್ತಾಯಿತು. ಇಂಗ್ಲೆಂಡಿನ ರಾಣಿಯಾದ ವಿಕ್ಟೋರಿಯಾ ರಾಣಿಯು ಹೊರಡಿಸಿದ ಈ ಇಸ್ತಿಹಾರುನಾಮೆಯು ಕ್ರಿಸ್ತಶತಾಬ್ದ ಸಾವಿರದ ಎಂಟನೂರ ಐವತ್ತೆಂಟನೆಯ ನವೆಂಬರ್ ತಿಂಗಳಲ್ಲಿ ಪ್ರಕಟವಾಯಿತು.

ಭಾರತದ ಸ್ವಾತಂತ್ರ ಸಂಗ್ರಾಮವು ಸಫಲವಾಗಲಿಲ್ಲ. ವಿಪ್ಲವದ ನಾಯಕರೆಲ್ಲರೂ ವೀರಸ್ವರ್ಗವನ್ನು ಪಡೆದಿದ್ದರು. ಅಥವಾ ವಿಫಲ ಮನೋರಥರಾಗಿದ್ದರು. ಝಾನ್ಸೀ ಲಕ್ಷ್ಮೀಬಾಯಿ-ಅಜಮುಲ್ಲಾಖಾನ್ ಮುಂತಾದವರುಗಳು ರಣಾಂಗಣದಲ್ಲಿ ಹೋರಾಡುತ್ತಾ ಅಸುಗಳನ್ನು ನೀಗಿ ವೀರಸ್ವರ್ಗವನ್ನು ಪಡೆದರು. ತಾಂತ್ಯಾಟೋಪಿಯು ಸ್ವಾತಂತ್ರ ವೀರರಿಗೆ ಸಹಜವಾದ ಬಲಿ ಪೀಠವನ್ನೇರಿ ಆತ್ಮ ತ್ಯಾಗಮಾಡಿದನು. ರಾವ್ ಸಾಹೇಬ್ ಪೇಶ್ವೆಯು ಸ್ವಾತಂತ್ರ ಜ್ಯೋತಿಯನ್ನು ಹೆಚ್ಚು ಕಾಲ ಉರಿಸಲಾರದೇ ಪ್ರಚ್ಛನ್ನವೇಷವನ್ನು ಧರಿಸಿ ದೇಶಾಂತರ ಗತನಾದನು. ಫಿರೋಜ್ ಷಹನು ಕಾಬೂಲಿನ ಮಾರ್ಗವಾಗಿ ತಪ್ಪಿಸಿಕೊಂಡು ಪರ್ಶಿಯಾಗೆ ಹೊರಟು ಹೋದನು!

ಹೀಗೆ ಭಾರತದಲ್ಲೆಲ್ಲಾ ಕ್ರಾಂತಿಯ ಜ್ವಾಲೆಗಳು ಆರಿ ಹೋಗಿ ಸ್ವತಂತ್ರಾಶಯವು ತಾತ್ಕಾಲಿಕವಾಗಿ ಶಮನವಾಗಿದ್ದಿತು. ಇನ್ನು ವಿಕ್ಟೋರಿಯಾ ರಾಣಿಯು ಇಸ್ತಿಹಾರು ನಾಮೆಯನ್ನು ಹಾಕಬೇಕಾದ ಅವಶ್ಯಕತೆ ಏನಿತ್ತು? ಇತ್ತು! ಅಂತಹ ಅವಶ್ಯಕತೆಯಿತ್ತು. ಈ ಇಸ್ತಿಹಾರು ನಾಮೆಯನ್ನು ಭಾರತದಲ್ಲಿ ರಾಣಿಯೊಬ್ಬಳು ಎದುರಿಸಿದಳು. ಅವಳು ಆಯೋಧ್ಯೆಯ ರಾಣಿ. ಆ ರಾಣಿಯು ಔಂಧ್‌ನಲ್ಲಿ ಸ್ವಾತಂತ್ರ ಜ್ಯೋತಿಯನ್ನುದೇದೀಪ್ಯಮಾನವಾಗಿ ಉರಿಸುತ್ತಿದ್ದಳು.

ಅಯೋಧ್ಯೆಯ ರಾಣಿಯು ಈ ಸಂದರ್ಭದಲ್ಲಿ ಒಂದು ರಾಜಘೋಷಣೆಯನ್ನು ಹೊರಡಿಸಿದಳು. ಅದರಲ್ಲಿ ಈರೀತಿಯಾಗಿತ್ತು !

"ಇಂಗ್ಲೆಂಡಿನ ರಾಣಿಯು ಹೊರಡಿಸಿರುವ ಪ್ರಕಟಣೆಯಿಂದ ಭಾರತವಾಸಿಗಳಾರೂ ಮೋಸ ಹೋಗದಿರಲಿ. ಇಂಗ್ಲೆಂಡಿನ ಕುಂಪಣಿಯ ಅಧಿಕಾರಕ್ಕೂ ರಾಣಿಯ ಅಧಿಕಾರಕ್ಕೂ ಯಾವ ಬದಲಾವಣೆಯೂ ಇಲ್ಲ. ಇಂಗ್ಲೆಂಡಿನ ರಾಣಿಯು ತನಗೆ ರಾಜ್ಯದಾಸೆಯಿಲ್ಲವೆಂದು ಹೇಳುತ್ತಾಳೆ ! ಹಾಗೆ ರಾಜ್ಯದಾಸೆಯಿಲ್ಲವಾದರೆ ನಮ್ಮ ದೇಶವನ್ನು ನಮಗೆ ಬಿಟ್ಟು ಹೊರಟುಹೋಗಬಾರದೇಕೆ ? ಭಾರತ ವಿಪ್ಲವದಲ್ಲಿ ಭಾಗವಹಿಸಿದವರೆಲ್ಲರೂ ಕ್ಷಮಿಸಲ್ಪಡುವುದೆಂದು ಹೇಳಲಾಗಿದೆ ! ಯಾರು ವಿಪ್ಲವಗಳಿಗಾಗಿ ಸೈನ್ಯಗಳನ್ನೂ ದೇಶಗಳನ್ನೂ ಶಿಕ್ಷೆ ಮಾಡಿದ್ದಾರೆ. ಸಾಯುವವನು ಯಾವುದನ್ನು ತಾನೇ ಮಾಡುವುದಿಲ್ಲ ? ತಪ್ಪಿತಸ್ಥನಂತಿರಲಿ. ನಿರಪರಾಧಿಯು ಸಹ ತಪ್ಪಿಸಿಕೊಳ್ಳಲು ಮಾರ್ಗವಿಲ್ಲವಾಗಿದೆ. ಎಲ್ಲವೂ ಬರೆಯಲ್ಪಟ್ಟಿದೆ. ಯಾವುದೂ ಬರೆಯಲ್ಪಟ್ಟಿಲ್ಲ. ಶಾಂತಿಯು ಸ್ಥಾಪನೆಯಾದ ಮೇಲೆ ರಸ್ತೆಗಳನ್ನೂ ಕಾಲುವೆಗಳನ್ನೂ ಮಾಡಿಸಲಾಗುವುದೆಂದು ಹೇಳಲಾಗಿದೆ. ಅಂದರೆ ಫರಂಗಿಗಳು ಹಿಂದೂಸ್ಥಾನದವರು ರಸ್ತೆಗಳನ್ನು ಮಾಡುವುದಕ್ಕೆ ಕಾಲುವೆಗಳನ್ನು ಮಾಡುವುದಕ್ಕೆ ಮಾತ್ರ ಅರ್ಹರೆಂದು ತಿಳಿದುಕೊಂಡಿರುವಂತಿದೆ. ಜನಗಳು ಈ ಇಸ್ತಿಹಾರು ನಾಮೆಯಲ್ಲಿರುವುದೇನೆಂಬುದನ್ನು ತಿಳಿದುಕೊಳ್ಳಲಾರದವರಾದರೆ ಅವರಿಗೆ ಮುಕ್ತಿಯೇ ಇಲ್ಲ ! ಯಾವ ಪ್ರಜೆಯೂ ಇದರಿಂದ ವಂಚಿತನಾಗದಿರಲಿ"

ಇಂತಹ ಉತ್ತರವನ್ನು ಕೊಟ್ಟ ರಾಣಿಯು ಇಸ್ತಿಹಾರುನಾಮೆಯಲ್ಲಿ ಕೊಡಲಾಗಿದ್ದಂತಹ ಆಶ್ವಾಸನವನ್ನು ತಿರಸ್ಕರಿಸಿದಳೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅಯೋಧ್ಯೆಯ ರಾಣಿಯು ಅಶ್ವಾರೋಹಿಯಾಗಿ–ಖಡ್ಗವನ್ನು ಜಳಪಿಸುತ್ತಾ,ಶತ್ರುರಕ್ತದಿಂದ ತೊಯ್ದು ಹೋದ ವಸ್ತ್ರಗಳಿಂದಲಂಕೃತಳಾಗಿ ಹೋರಾಡಿದಳು. ಸ್ವಯಂ ನಾನಾರಾಯನೇ ನಿಂತು ಯುದ್ಧವನ್ನು ನಡೆಯಿಸಿದನು. ಫರಂಗೀ ರಾಣಿಯ ಇಸ್ತಿಹಾರುನಾಮೆಯು ಪ್ರಕಟವಾದ ಮೇಲೆ–ಭಾರತದ ಇತರ ಕಡೆಗಳಲ್ಲೆಲ್ಲಾ ಸ್ವಾತಂತ್ರ್ಯ ಯುದ್ಧವು ನಿಂತ ಮೇಲೆ, ಐದು ತಿಂಗಳುಗಳ ಕಾಲ ಈ ಸ್ವತಂತ್ರ ವೀರರು ವಿರೋಧಾತ

ವಾಗಿ ಯುದ್ಧ ಮಾಡಿದರು. ಆದರೆ ಭಾರತಿಯ ದೌರ್ಭಾಗ್ಯದಿಂದ ಆ ಕಡೆಯ ಸ್ವಾತಂತ್ರ ಯುದ್ಧವೂ ಬಿದ್ದು ಹೋಯಿತು.

ಫರಂಗೀ ಸೈನ್ಯಗಳು ನಾನಾದಳಪತಿಗಳ ಅಧೀನದಲ್ಲಿ ಅಯೋಧ್ಯೆಯ ಕಡೆಗೆ ಬಂದರು. ಯುದ್ಧದಲ್ಲಿ ಸೋತುಹೋದ ವಿಪ್ಲವಕಾರರನ್ನು ಮೇಲುಗಡೆಗೆ ಒತ್ತರಿಸಿದರು. ಮೇಲೆ ಹಿಮಾಲಯ ಪರ್ವತ! ಬೇಟೆಗಾರರಂತೆ ಬರುತ್ತಿದ್ದ ಫರಂಗೀ ಸೇನೆಗಳ ದೃಷ್ಟಿಯನ್ನು ತಪ್ಪಿಸಿಕೊಂಡು ನಾನಾರಾಯನೂ ಅಯೋಧ್ಯೆಯ ರಾಣಿಯೂ ಅರವತ್ತು ಸಹಸ್ರ ಮಂದಿ ವಿಪ್ಲವಕಾರರೊಡನೆ ಹಿಮಾಲಯಾ ಪರ್ವತದ ತಪ್ಪಲಿನಲ್ಲಿರುವ ದುರ್ಗಮವಾದ ಅರಣ್ಯ ಪ್ರದೇಶವನ್ನು ಪ್ರವೇಶಮಾಡಿದರು.

ನಾನಾರಾಯನೂ ವಿಪ್ಲವಕಾರರೂ ಬಂದು ನೆಲೆಸಿದಂತಹ ಹಿಮವತ್ಪರ್ವತ ಪ್ರಾಂತವು ನೇಪಾಳದಧಿಪತಿಯಾದ ಜಂಗ್ ಬಹದ್ದೂರನಿಗೆ ಸೇರಿದ್ದು. ದೆಹಲಿ, ಗ್ವಾಲಿಯರ್ ಮತ್ತು ಕಾನಪುರಗಳನ್ನು ಜಯಿಸಿದ ಫರಂಗೀ ಸೇನೆಗಳು ಮೂರು ಕಡೆಗಳಿಂದಲೂ ಬಂದು ಔಂಧ್‌ನ ಯುದ್ಧದಲ್ಲಿ ಭಾಗವಹಿಸಿ, ವಿಪ್ಲವಕಾರರನ್ನು ಸುತ್ತುಗಟ್ಟಿ ಅವರನ್ನು ಮೇಲುಗಡೆಗೆ ಒತ್ತರಿಸಿದರು. ವಿಪ್ಲವಕಾರರು ಗುಹಾರಣ್ಯಗಳಿಂದ ನಿಬಿಡವಾದ ಪರ್ವತ ಪ್ರಾಂತವನ್ನು ಪ್ರವೇಶಿಸಿ ಅವರ ವ್ಯೂಹದಿಂದ ತಪ್ಪಿಸಿಕೊಂಡರು.

ನಾನಾರಾಯನು ತನ್ನ ತಮ್ಮ ಬಾಲಾಸಾಹೇಬನನ್ನು ಜಂಗ ಬಹದ್ದೂರನ ಬಳಿಗೆ ಕಳುಹಿಸಿದನು. ಬಾಲಾಸಾಹೇಬನಿಗೆ ನೇಪಾಳದಧಿಪತಿಯ ಭೇಟಿಯಾಯಿತು. ಆ ಭೇಟಿಯಲ್ಲಿ–ಮಹಾರಾಜಾ! ತಾವು ನಾನಾರಾಯರಿಗೆ ಬರೆದು ಕಳುಹಿಸಿದಂತಹ ಪತ್ರವು ತಲುಪಿತು. ಭಾರತದಲ್ಲಿ ಆರಂಭವಾಗಿರುವಂತಹ ಈ ಮಹಾ ವಿಪ್ಲವಕ್ಕೆ–ಸ್ವಧರ್ಮ ಸ್ವದೇಶಗಳ ಉದ್ಧಾರವೇ ಉದ್ದೇಶವಾಗಿದೆ. ಫರಂಗಿಯವರು ದೇಸೀರಾಜರುಗಳೊಡನೆ ಮಾಡಿಕೊಂಡಿರುವ ಕೌಲು ಕರಾರುಗಳೆಲ್ಲವನ್ನೂ ಮುರಿದು ಒಂದಾದನಂತರ ಒಂದರಂತೆ ದೇಶಗಳನ್ನು ಆಕ್ರಮಿಸುತ್ತಿದ್ದಾರೆ. ಡಾಲ್‌ಹೌಸಿಯು ತಂದ ಹೊಸ ಯೋಜನೆಯು ಭಾರತ ರಾಜತ್ವದ ಮೇಲೆ ವಜ್ರಾಘಾತವಾಗಿದೆ. ಈಗಂತೂ ಫರಂಗೀ ಆಡಳಿತವು ಧರ್ಮಕಂಟಕವಾಗಿ ಪರಿಣಮಿಸುತ್ತಿದೆ ” ಎಂದು ಹೇಳಿದನು.

ಜಂಗ ಬಹದ್ದೂರನು ಸೌಜನ್ಯವಾಗಿ ಮಾತನಾಡಿದನು. ಆದರೆ ಅದರಲ್ಲಿ ವಿಪ್ಲವಕಾರರಿಗೆ ಪ್ರಯೋಜನವಾಗುವಂತಹ ಮಾತು ಒಂದೂ ಇರಲಿಲ್ಲ. ಕಡೆಗವನು "ಬಾಲಾ ಸಾಹೇಬ್! ನಾವು ನಮ್ಮ ಪ್ರಧಾನಿಗಳೊಂದಿಗೆ ಸಮಾಲೋಚನೆ ಮಾಡಿ ನಮ್ಮ ಅಭಿಪ್ರಾಯವನ್ನು ಅವರ ಮೂಲಕ ನಿಮಗೆ ತಿಳಿಯಪಡಿಸುತ್ತೇವೆ. ನಾಳೆಯ ದಿನ ಪ್ರಾತಃಕಾಲ ಅವರು ನಿಮ್ಮನ್ನು ಬಂದು ನೋಡುತ್ತಾರೆ" ಎಂದನು.

ಮೂರನೆಯ ದಿನ ಪ್ರಾತಃಕಾಲ ಪ್ರಧಾನಿಯಾದ ಬಲಭದ್ರಸಿಂಗನು ವಿಪ್ಲವದ ನಾಯಕರನ್ನು ಬಂದು ಕಂಡನು. ಪರಸ್ಪರಾಭಿನಂದನೆಗಳೇ ಮುಂತಾದವುಗಳು ಸಂಪ್ರದಾಯ ಪ್ರಕಾರ ಆದನಂತರ ನಾನಾರಾಯನು –"ಸಿಂಗ್‌ಜೀ! ಅಯೋಧ್ಯೆಯಲ್ಲಿದ್ದಾಗಲೇ ನೇಪಾಳದಧಿಪತಿಯ ಪತ್ರವು ನಮಗೆ ಬಂದು ತಲುಪಿತು. ಅದು ನಮ್ಮಲ್ಲಿ ನೂತನೋತ್ಸಾಹ-ಆನಂದಗಳನ್ನುಂಟುಮಾಡಿದೆ. ಈ ಗಾಢಾಂಧಕಾರದಲ್ಲಿ ಅದು ನಮಗೆ ಆಶಾಕಿರಣವಾಗಿ ಕಂಡುಬರುತ್ತಿದೆ. ವಿಪ್ಲವವು ಪುನರಾರಂಭವಾಗಿ ಫರಂಗಿಗಳ ಸರ್ವನಾಶವಾಗಿರುವ ಭರವಸೆಯುಂಟಾಗಿದೆ. ಈ ಭಾವನೆಯಿಂದಲೇ ನಾವು ನೇಪಾಳರಾಜ್ಯವನ್ನು ಪ್ರವೇಶಮಾಡಿದ್ದೇವೆ. ಇದಕ್ಕಾಗಿ ನಾವು ಮಹಾರಾಜಾ ಜಂಗ್ ಬಹದ್ದೂರರಿಗೆ ಚಿರಋಣಿಗಳಾಗಿದ್ದೇವೆ"–ಎಂದು ಹೇಳಿದನು.

"ಅದೆಲ್ಲವೂ ಸರಿ! ಆದರೆ ನಾನಾ ಸಾಹೇಬ್, ಯಾವ ಉದ್ದೇಶದಿಂದ ನೇಪಾಳವು ತಮಗೆ ಸಹಾಯ ಮಾಡಬೇಕೆಂದು ಅಪೇಕ್ಷೆ ಮಾಡುತ್ತೀರಿ?" ಎಂದು ಬಲಭದ್ರಸಿಂಗ್ ಕೇಳಿದನು.

"ಪ್ರಧಾನಿಗಳೇ! ಈ ವಿಪ್ಲವವೇ ಸ್ವದೇಶ–ಸ್ವಧರ್ಮಗಳ ಉದ್ಧಾರಕ್ಕಾಗಿ ಆರಂಭವಾಗಿದೆ. ಅದೇ ಉದ್ದೇಶದಿಂದಲೇ ಭಾರತದ ಅನೇಕ ಮಂದಿ ನರೇಂದ್ರರು ಇದರಲ್ಲಿ ಭಾಗವಹಿಸಿ ಸರ್ವಸ್ವವನ್ನೂ ತ್ಯಾಗ ಮಾಡಿದ್ದಾರೆ"

"ನೇಪಾಳವು ಸರ್ವ ಸ್ವತಂತ್ರರಾಜ್ಯ! ಇಲ್ಲಿ ಯಾರ ಅಧಿಕಾರವೂ ಇಲ್ಲ. ಫರಂಗಿಗಳ ಅಧಿಕಾರವೂ ಇಲ್ಲಿಲ್ಲ. ಭಾರತದ ಇತರ ಕಡೆಗಳಲ್ಲಿ ಫರಂಗಿಗಳ ಆಡಳಿತದಿಂದ ಸ್ವಧರ್ಮ-ಸ್ವದೇಶಗಳ ಪ್ರತಿಷ್ಠೆಗೆ ಕಂಟ

ಕವಾಗಿರಬಹುದು. ಆದರೆ ನೇಪಾಳದಲ್ಲಿ ಅಂತಹ ಪ್ರಮೇಯವು ಬಂದಿಲ್ಲ. ಎಂದೆಂದಿಗೂ ಬರುವುದೇ ಇಲ್ಲ."

"ಭಾರತದ ಇತರ ರಾಜರುಗಳಿಗಾಗಿ ಇತರ ಪ್ರದೇಶಗಳಿಗಾಗಿ ತಾವು ಈ ಅಭಿನಿಯೋಗವನ್ನು ವಹಿಸಬೇಕು"

"ಪೇಶ್ವೆಗಳೇ! ಆ ರಾಜರುಗಳಿಗೂ ಆ ಪ್ರದೇಶಗಳಿಗೂ ನೇಪಾಳದಧಿಪತಿಗೂ ಸಂಬಂಧವೇನು?"

"ಭಾರತದ ರಾಜಮಹಾರಾಜರುಗಳಿಗೆ ನೇಪಾಳದಧಿಪತಿಯು ಸಾರ್ವಭೌಮನಾಗಲಿ! ಆ ಪ್ರದೇಶಗಳು ನೇಪಾಳದ ಸಾಮ್ರಾಜ್ಯವಾಗಲಿ! ಈ ಮಹಾವಿಪ್ಲವದಲ್ಲಿ ಅಸುಗಳನ್ನು ನೀಗಿದ, ತ್ಯಾಗಮಾಡುತ್ತಿರುವ ರಾಜಾಧಿರಾಜರ, ಸೈನಿಕರ, ಪ್ರಜೆಗಳ ಪ್ರತಿನಿಧಿಯಾಗಿ ನಾನೀ ಆಶ್ವಾಸನೆಯನ್ನು ಕೊಡುತ್ತೇನೆ. ನಾವೆಲ್ಲರೂ ನೇಪಾಳದಧಿಪತಿಯ ಅಧೀನದಲ್ಲಿ ಭಾರತ ಸ್ವಾತಂತ್ರ್ಯ ಯುದ್ಧವನ್ನು ಮಾಡುತ್ತೇವೆ ನಾವು ಗೆದ್ದ ಪ್ರದೇಶವೆಲ್ಲವೂ ನೇಪಾಳದಧೀನವಾಗುತ್ತವೆ"

"ಈ ಪ್ರಸಂಗದಲ್ಲಿ ತಾಟಸ್ಥ್ಯದಿಂದಿರ ಬೇಕೆಂದು ನಾವು ನಿರ್ಣಯಿಸಿ ಕೊಂಡಿದ್ದೇವೆ"

"ಪ್ರಧಾನಿಗಳೇ! ಅಯೋಧ್ಯೆಯ ಯುದ್ಧಕ್ಕೆ ಫರಂಗಿಗಳ ಸೈನ್ಯಕ್ಕೆ ಸಹಾಯವಾಗಿ ನಿಮ್ಮ ಘೂರ್ಖಾಸೇನೆಗಳನ್ನು ಕಳುಹಿಸಿದ್ದೀರಿ. ಆದರಿಂದ ತಾಟಸ್ಥ್ಯವು ಭಂಗವಾಗಿದೆ. ನಮಗೂ ಒಂದು ಬಾರಿ ಸಹಾಯ ಮಾಡಿರಿ. ನಮಗೆ ಆಯುಧಸಾಮಗ್ರಿಗಳು ಬೇಕಿಲ್ಲ. ಅವು ನಮ್ಮಲ್ಲಿವೆ. ನಮಗೆ ಆಹಾರವು ಬೇಕಿಲ್ಲ. ಅದನ್ನು ನಾವು ಸಂಪಾದನೆ ಮಾಡಿಕೊಳ್ಳುತ್ತೇವೆ. ನಮ್ಮ ಸೈನ್ಯಗಳು ನೇಪಾಳದಲ್ಲಿ ಹಾದು ಕಲ್ಕತ್ತೆಯ ಕಡೆಗೆ ಹೋಗಲು ರಹದಾರಿಯನ್ನು ಕೊಡಿರಿ. ನಿಮ್ಮ ರಾಜ್ಯದಿಂದ ನಾವು ಹೊರಟು ಹೋಗುತ್ತೇವೆ"

"ಆ ಮಾರ್ಗವೂ ನಮಗೆ ಸರಿಯಾಗಿ ತೋರುವುದಿಲ್ಲ. ನಿಮಗೆ ಶ್ರೇಯಸ್ಕರವಾದ ಮಾರ್ಗವು ಬೇರೊಂದಿದೆ"

"ಅದೇನು? ಹೇಳೋಣವಾಗಲಿ? ನೀವು ಕೊಡತಕ್ಕಂತಹ ಸಲಹೆಯನ್ನೂ ನಾವು ಆಲೋಚಿಸುತ್ತೇವೆ"

" ವಿಕ್ಟೋರಿಯಾ ರಾಣಿಯ ಘೋಷಣೆಯು ನಿಮಗಾಗಿ ದಾರಿ ತೋರಿದೆ. ನೀವೆಲ್ಲರೂ ಆಯುಧಗಳನ್ನು ಕೆಳಗಿಟ್ಟು ಶರಣಾಗತರಾಗಿರಿ· ನಿಮಗೆ ಕ್ಷಮೆಯು ಕೊಡಲ್ಪಡುತ್ತದೆ "

ಈ ಮಾತು ಕೇಳಿ ಅಲ್ಲಿದ್ದವರಿಗೆಲ್ಲರಿಗೂ ಕೋಪವು ಬಂದಿತು. ನಾನಾರಾಯನು ಕೋಪೋದ್ರಿಕ್ತನಾಗಿ ಹೇಳಿದನು-" ಪ್ರಧಾನಿಯೇ ! ಈರೀತಿ ಮಾಡುವುದಕ್ಕಾಗಿ ನಾವು. ವಿಪ್ಲವಾರಂಭ ಮಾಡಲಿಲ್ಲ. ಇದಕ್ಕಾಗಿ ಲಕ್ಷ ಲಕ್ಷ ವೀರರು ಸರ್ವಸ್ವವನ್ನೂ ತ್ಯಾಗಮಾಡಿ ಹೋರಾಡಲಿಲ್ಲ. ನಮ್ಮ ಬಳಿ ಬಂದು, ಸ್ವಾತಂತ್ರವೀರರ ಈ ಸಮೂಹದಲ್ಲಿ ಹೇಡಿಯಂತೆ ಇಂತಹ ಮಾತುಗಳನ್ನಾಡಲು ನಿನಗೆ ನಾಚಿಕೆಯಾಗುವುದಿಲ್ಲವೇ ? ನೀನು ಹೋಗು! ನೇಪಾಳದಧಿಪತಿಯ ಸಹಾಯವು ನಮಗೆ ಬೇಡ. ವಿಪ್ಲವವಾರಂಭಿಸಿದ ನಾವು ಅದರಿಂದ ಪ್ರಾಪ್ತವಾಗುವ ಕಷ್ಟ ನಷ್ಟಗಳನ್ನು ತೆಗೆದುಕೊಳ್ಳಲು ಹಿಂಜರಿಯುವುದಿಲ್ಲ "

ಬಲಭದ್ರಸಿಂಗನು ನಾನಾರಾಯನಿಂದ ಆ ಉತ್ತರವನ್ನು ತೆಗೆದು ಕೊಂಡು ಅಲ್ಲಿಂದ ಹೊರಟು ಹೋದನು.

ಮಧ್ಯಾಹ್ನದ ಸಮಯ ! ಸೂರ್ಯಭಗವಾನನು ಕೈಲಾಸ ಪರ್ವತದ ರಜತ ಶಿಖರಗಳ ಮೇಲೆ ಚೆಲ್ಲಿದ ಕಿರಣಗಳು ಆಪರ್ವತ ಪ್ರಾಂತದಲ್ಲಿ ಒಂದು ಬಗೆಯ ಅವರ್ಣನೀಯವಾದ ಪ್ರಕಾಶವನ್ನುಂಟುಮಾಡಿದ್ದವು. ಮಂದ ಮಾರುತದಿಂದ ತರಲ್ಪಟ್ಟ, ಗಂಗಾನದಿಯ ಅಘಾದ ಜಲರಾಶಿಗೆ ಮಾತೃಕ ವಾದ ಹಿಮಕಣಗಳು ಕೈಲಾಸಪತಿಗೆ ಹಚ್ಚಿದ ಧೂಪದ ಸುವಾಸಿತ ಧೂಮವೋ ಎಂಬಂತೆ ಕಂಡು ಬರುತ್ತಿದ್ದವು. ಸಹಸ್ರಾರು ವರ್ಷಗಳು ತಪಶ್ಚರ್ಯೆಯನ್ನು ಮಾಡಿ ಭಗವಂತನನ್ನು ಕಾಣದೇ ಮೊರೆಯಿಡುತ್ತಿರುವ ಮುನಿಪುಂಗವರ ಕೂಗೋ ಎಂಬಂತೆ ಬಿಸುಳಿಗಾಳಿಯು ಶಿಳ್ಳು ಕೇಳಿಬರು ತ್ತಿತ್ತು. ಇಂತಹ ಮಹಾಮಹಿಮಾನ್ವಿತವಾದ ಪ್ರದೇಶದಲ್ಲಿ, ಗಿರಿ ಕಂದರ ಗಳಿಂದ ಕೂಡಿದ ಆ ವನ ಪ್ರಾಂತದಲ್ಲಿ, ಸಹಸ್ರ ಸಹಸ್ರ ವಿಪ್ಲವವೀರರು ಕುಳಿತಿದ್ದರು. ವಿಪ್ಲವದ ಮಹಾನಾಯಕನಾದ ನಾನಾರಾಯನು ಅವ ರನ್ನು ಉದ್ದೇಶಮಾಡಿ ಮಾತನಾಡುತ್ತಿದ್ದನು. " ವೀರಪುಂಗವರೇ ಭಾರತದ ಸ್ವಾತಂತ್ರ್ಯೋದ್ದೇಶದಿಂದ ನಾವು ಮಾಡಿದ ತಪಸ್ಸು ಭಂಗವಾ ಗಿದೆ. ಇಲ್ಲ ! ಅದಕ್ಕಾಗಿ ಇನ್ನೂ ತಪಸ್ಸು ಮಾಡಬೇಕಾಗಿದೆ. ಆದರೆ

ಆ ತಪಸ್ಸನ್ನು ಮಾಡಬೇಕಾದ ದೇಹವು ಗಳಿತವಾಗಿದೆ. ಈ ಸಂದರ್ಭದಲ್ಲಿ ಫರಂಗೀ ಅಧಿಕಾರಿಯು ನಮಗೊಂದು ಕಾಗದವನ್ನು ಬರೆದು ನಾವು ಕಾನೂನು ಬಾಹಿರರೆಂದು ಹೇಳಿದ್ದಾನೆ. ನಮ್ಮನ್ನು ಶರಣಾಗತರಾಗಬೇಕೆಂದು ಹೇಳಿದ್ದಾನೆ. ಈ ಹಿಂದೂಸ್ಥಾನದಲ್ಲಿ ಹೊರಗಿನಿಂದ ಬಂದ ಫರಂಗಿಗಳು ರಾಜರು! ಈ ಪವಿತ್ರ ಭೂಮಿಯ ಮಕ್ಕಳಾದ ನಾವು ಕಾನೂನು ಬಾಹಿರರು! ಕಳ್ಳರು! ಶರಣಾಗತಿ? ಅದು ಎಂದೆಂದಿಗೂ ಇಲ್ಲ. ಇಂದಲ್ಲದಿದ್ದರೆ ಎಂದಾದರೂ ಈ ವಿಪ್ಲವಾಗ್ನಿಯು ಪ್ರಜ್ವಲಿತವಾಗುತ್ತದೆ. ನಮ್ಮೆಲ್ಲರ ತಪಸ್ಸಿನಿಂದಲೂ ಉದ್ಭವವಾಗುವ ಆ ಕಾಡುಕಿಚ್ಚಿನಲ್ಲಿ ಫರಂಗೀ ಪ್ರಭುತ್ವವವು ಉರಿದು ಹೋಗುತ್ತದೆ. ನಾವು ಚಿತ್ತೂರಿನ ವೀರ ರಜಪೂತರಂತೆ ಖಡ್ಗವನ್ನು ಝಳಪಿಸುತ್ತಾ, ಶತ್ರು ಸಂಹಾರ ಮಾಡುತ್ತಾ, ವೀರಸ್ವರ್ಗವನ್ನು ಪಡೆಯೋಣ. ಉರಿಯುತ್ತಾ, ನಾಲಿಗೆಗಳನ್ನು ಚಾಚುತ್ತಾ ಇರುವಂತಹ ಅಗ್ನಿ ಮಧ್ಯದಲ್ಲಿ ಚಿತ್ತೂರಿನ ವೀರರವಾಣಿಯರಂತೆ ಪ್ರವೇಶ ಮಾಡೋಣ! ವೀರರೇ! ಸಹೋದರರೇ! ನಮ್ಮ ಸ್ವಾತಂತ್ರ್ಯೋದ್ಯಮದ ಪ್ರಥಮೋಧ್ಯಾಯವು ಇಲ್ಲಿಗೆ ಮುಗಿಯಿತು. ಹಿಂದುಸ್ಥಾನಕ್ಕೆ ಜಯವಾಗಲಿ! ವಿಪ್ಲವಕ್ಕೆ ವಿಜಯವಾಗಲಿ!

ಅರಣ್ಯಮಧ್ಯದಿಂದ ಸಹಸ್ರ ಸಹಸ್ರ ಕಂಠಗಳು ಹಿಂದೂಸ್ಥಾನಕ್ಕೆ ಜಯವಾಗಲಿ! ವಿಪ್ಲವಕ್ಕೆ ವಿಜಯವಾಗಲಿ" ಎಂದು ಜಯಘೋಷ ಮಾಡಿದವು.

ಸ್ವಲ್ಪಹೊತ್ತಿನಲ್ಲಿ ಅಲ್ಲಿ ಸೇರಿದಿದ್ದ ವೀರರು ವಿವಿಧ ಮಾರ್ಗಾನುಗಾಮಿಗಳಾಗಿ ಆ ಅರಣ್ಯದಿಂದ ನಿರ್ಗಮಿಸಿದರು. ನಾನಾರಾಯನೂ ಅದೃಶ್ಯನಾದನು. ಅವರುಗಳು ಎಲ್ಲಿಗೆ ಹೋದರು? ಅದು ಯಾರಿಗೂ ಗೊತ್ತಿಲ್ಲ.!